# ಮಗಳಲ್ಲ—ಹೆಂಡತಿ

## ಮತ್ತು ಇತರ ಕಥೆಗಳು




ಲೇಖಕರು:

ಶ್ರೀ ಪಣಂಬೂರು ಯೋಗೀಶರಾಯರು





ಪ್ರಕಾಶಕರು:

ಸಮಾಜ ಪುಸ್ತಕಾಲಯ, ಧಾರವಾಡ.

ಜುಲೈ ೧೯೪೮  ೦—೧೨—೦

# ಪರಿವಿಡಿ






ಮುದ್ರಕರು:

**ಜಿ. ಆರ್. ಪಂಡಿತ**

ಕೇಳಕರ ಪ್ರೆಸ್,

ಧಾರವಾಡ.

ಪ್ರಕಾಶಕರು:

**ಬಾಲಚಂದ್ರ ಘಾಣೇಕರ**

ಸಮಾಜ ಪುಸ್ತಕಾಲಯ,

ಧಾರವಾಡ.

# ಮಗಳಲ್ಲ—ಹೆಂಡತಿ !

ನಮ್ಮೂರ ಖಾನೇಸುಮಾರಿಯನ್ನು ಪರಿಶೀಲಿಸಿದರೆ, ಹಳಬರೇ ಅದರಲ್ಲಿ ಅಧಿಕ ಅಂಕಿ ಸಂಖ್ಯೆಯಲ್ಲಿರುವದನ್ನು ಕಾಣಬಹುದು. ಹಳಬರೆಂದರೆ ಇತರ ಕಡೆಗಳಲ್ಲೆಲ್ಲಾ ಹೇಗೋ ಇರಲಿ ; ನಮ್ಮೂರಲ್ಲಿ ಮಾತ್ರ ಕಿರಿಯರಿಗೆ ಹಳಬರಲ್ಲಿ ಅತ್ಯಾದರ ; ಗೌರವ. ಈ ಸಂಭಾಷನೆಗೆ ಹೊರಗಾದವರೆಂದರೆ ರಂಗರಾಯರು ಒಬ್ಬರೇ. ರಂಗರಾಯರನ್ನು ಬಿಟ್ಟು ಉಳಿದ ಯಾವ ಹಳಬರನ್ನೂ, ನಮ್ಮೂರ ಹುಡುಗರು ‘ ಅಜ್ಜಯ್ಯಾ ! ’ ಎಂದು ಕರೆದು ಗೇಲಿ ಮಾಡುವದಿಲ್ಲ. ಉಳಿದವರಿಗೆ ಹಾಗೆ ಕರೆದರೂ, ಕೋಪವಿಲ್ಲವೆನ್ನಿ. ಆದರೆ ರಂಗರಾಯರು ಮಾತ್ರ, ‘ ಅಜ್ಜಯ್ಯ ’ ಎಂದು ಕರೆದರೆ ಕೆಣಕಿದ ಫಣಿಯಂತಾಗುತ್ತಾರೆ. ಎಷ್ಟು ರೇಗಿ ಬೈದರೂ, ಹುಡುಗರೇನು ಮತ್ತೆ ಅವರನ್ನು ಅಣಕಿಸದೆ ಬಿಡುತ್ತಿರಲಿಲ್ಲ. ಪರಿಣಾಮವಾಗಿ ರಾಯರಿಗೆ, ಈ ರೇಗಾಟ, ಕೂಗಾಟಗಳಿಂದ ಇನ್ನಷ್ಟು ಹೆಚ್ಚಿನ ಅವಮಾನ. ಊರಿನ ಹಿರಿಯರು ಕೂಡಾ ಅಷ್ಟೇ ; ರಾಯರನ್ನು ‘ ಮುದಿಗೂಬೆ ’ ಎಂದು ಹಿಂದಿನಿಂದ ಸಂಬೋಧಿಸಿ ಕಿಸಕಿಸ ನಗುತ್ತಾರೆ. ಆದರೆ, ಬಹಿರಂಗವಾಗಿ ಹಾಗೆ ಕರೆಯುವ ಧೃತಿಯಿಲ್ಲ. ಅನೇಕ ಸಾರ್ವಜನಿಕ ಚಟುವಟಿಕೆಗಳಲ್ಲಿ, ನಿಧಿ ಸಂಗ್ರಹಣ ಕಾರ್ಯದಲ್ಲಿ, ಕೋಟ್ಯಾಧೀಶ್ವರರಾದ ರಾಯರ ನೆರವು ಊರವರಿಗೆ ಬೇಕಾಗಿತ್ತು.

ಜನರು ನಿಷ್ಕಾರಣವಾಗಿ ಯಾರನ್ನೂ ಅಣಕಿಸ ಹೋಗುವದಿಲ್ಲ. ರಾಯರನ್ನು ಅಣಕಿಸುವದಕ್ಕೆ ಅವರ ಹುಚ್ಚಾಸೆಯೊಂದೇ ಕಾರಣ. ಪಂಚಕೋಮಲೆಯರನ್ನು ರಾಯರು ನಿರ್ದಯದಿಂದ ಇದುತನಕ ವೈತರಣಿ ದಾಟಿಸಿದ್ದಾರೆ. ಕೋಮಲೆಯರಾದರೂ, ರಾಯರ ಸಂಪರ್ಕದಿಂದ ಅವರು, ಒರಟರಾಗಿ ಬೂದಿಯಾಗಬೇಕಾಯಿತು. ಆದರೂ, ರಾಯರು ತಮ್ಮ ಹುಚ್ಚಾಸೆಯನ್ನು ಬಿಡಲಿಲ್ಲ. ಈಗ, ಆರನೆಯ ಕೋಮಲೆಗಾಗಿ ಹೊಂಚು ಹಾಕುತ್ತಿದ್ದಾರೆ. ಹಿಂದಿನ ಕಾಲವಲ್ಲಾದರೆ, ರಾಯರ ಮನೋರಥವೆಂದರೆ, ಅದು ಕ್ಷಣಕಾಲದಲ್ಲಿ ನೆರವೇರುತ್ತಿತ್ತು. ಆದರೆ, ಈಗ ಹಾಗಲ್ಲ. ಭೂತ ಪಿಶಾಚಿಗಳಿಗೂ ಹೆದರದ ರಾಯರು ಕುಡಿಮೀಸೆಯ ತರುಣರಿಗೆ ಹೆದರಲೇ ಬೇಕಾಗಿತ್ತು. ಪಟ್ಟಣದಲ್ಲಿ S.S.L.C. ಯಲ್ಲಿ ನಾಲ್ಕಾರು ಬಾರಿಯೂ ತೇರ್ಗಡೆಯಾಗದೆ ಹಿಂದಿರುಗಿದ್ದ ಕೆಲವರು

ಊರಲ್ಲಿ ದೊಡ್ಡ ಕ್ರಾಂತಿಯನ್ನೇ ಉಂಟು ಮಾಡಿದ್ದರು. ಅನಾಥಾಶ್ರಮ, ವಿಧ್ವಾ ಸಂಘ, ಕಾಂಗ್ರೆಸ್ ಕಚೇರಿಗಳೆಲ್ಲವೂ ತೆರೆಯಲ್ಪಟ್ಟು, ಊರಿನ ಅನಾಗರಿಕರನ್ನು ನಾಗರಿಕರನ್ನಾಗಿ ಪರಿವರ್ತಿಸಲು ಪ್ರತಿಪ್ರಯತ್ನಿಸುತ್ತಿದ್ದವು. ಇದಕ್ಕೆ ಸಂಬಂಧಿಸಿದವರೇ ರಾಯರ ಹಾವ ಹೊಳೆಯಲ್ಲಿ ಒಡ್ಡುಗಲ್ಲಾದುದು. ಊರಿನಲ್ಲಿ ಯಾರೂ ಮುದುಕರಿಗೆ ಮಕ್ಕಳನ್ನು 'ವಿಕ್ರಯಿಸ' ಕೂಡದೆಂದೂ, ಮಕ್ಕಳನ್ನು ಸಲಹಲು ಶಕ್ತಿಯಿಲ್ಲದವರು ಅನಾಥಾಶ್ರಮಕ್ಕೆ ಅವರನ್ನು ಕಳುಹಿಸಬೇಕೆಂದೂ, 'ಖಾದಿ ಟೋಪಿ' ಗಳು ಸಾರುತ್ತಿದ್ದರು. ಈ ಸಂದೇಶದ ಕಡೆಗೆ ಜನರೂ ಸ್ವಲ್ಪ ಕಿವಿಗೊಡುತ್ತಿದ್ದರು. ಅನಾಥಾಶ್ರಮವು ಹೆಮ್ಮಕ್ಕಳಿಂದ ತುಂಬಿಹೋಗಿತ್ತು. ಇದರಿಂದಾಗಿಯೇ ರಾಯರಿಗೆ ವಧೂನ್ವೇಷಣಾ ಕಾರ್ಯವು ಸ್ವಲ್ಪ ಪ್ರಯಾಸವಾದುದು.

ಆದರೂ, ರಾಯರು ಕಾರ್ಯೋನ್ಮುಖರಾಗಿದ್ದರು. ಖಾದೀಮುಖಂಡ ಸುಂದರರಾಯನು ಇದನ್ನು ಕೇಳಿ, "ಆ ಮುದುಕನಿಗೆ ಇಷ್ಟು ಛಲವೇ ! ನೋಡೋಣ, ಈ ಭೀಮ ದುರ್ಯೋಧನರಲ್ಲಿ ಯಾರಿಗೆ ವಿಜಯವೆಂಬುದನ್ನು" ಎಂದು ಪ್ರತಿಜ್ಞೆಯನ್ನೇ ಮಾಡಿದನು. ಅಂದಿನಿಂದ, ರಾಯರು ಬೀದಿಗಿಳಿದರೆ ಸಾಕು, ಕಳ್ಳನನ್ನು ಹಿಂಬಾಲಿಸುವ ತಳವಾರರಂತೆ 'ಖಾದಿ'ಗಳು ಅವರನ್ನು ಅನುಸರಿಸುತ್ತಿದ್ದರು. 'ಖಾದಿ'ಗಳಿಗೆ ತಿಳಿಯದ ರಾಯರ ಯಾವ ಕಾರ್ಯಕಲಾಪಗಳೂ ಇರಲಿಲ್ಲ. ಅನೇಕ ಕಡೆಗಳಲ್ಲಿ ಇದರಿಂದಾಗಿ ಹೆಮ್ಮಕ್ಕಳು ರಾಯರಿಗೆ ದಕ್ಕದೆ ಹೋದರು! ನಿರಾಶೆಯು ಹೆಚ್ಚಾದಷ್ಟು ರಾಯರ ಛಲವೂ ಹೆಚ್ಚಾಯಿತು. ಈ ಹುಚ್ಚಾಟವನ್ನು ನೋಡಿ ಕೆಲವರು ಸಮಾಧಾನಪಡಿಸಲೂ ಬಂದರು. ಆದರೆ, ರಾಯರು ಜಗ್ಗಲಿಲ್ಲ. "ಏನು ಹೇಳ್ತೀರಯ್ಯಾ, ನೀವು? ಹುಡುಗಿಯರಿಗಾಗಿ ನಾನು ಹಾತೊರೆಯುತ್ತಿಲ್ಲ. ಹುಡುಗನಿಗಾಗಿ ಪೇಚಾಡುತ್ತಿದ್ದೇನೆ. ಹುಡುಗಿಯರಿಲ್ಲದೆ, ಹುಡುಗನುಂಟೆ? ಪುತ್ ನರಕದಿಂದ ನನ್ನನ್ನು ನನ್ನ ಪುತ್ರನು ರಕ್ಷಿಸಬೇಕಲ್ಲದೆ, ಈ ಖಾದಿಗಳು ರಕ್ಷಿಸ ಬರುತ್ತಾರೆಯೇ? " ಎನ್ನುತ್ತಿದ್ದರೆ ನಡು ನಡುವೆ ಸತ್ತವರ ಮೇಲೂ ಬೈಗರ ಸುರಿಮಳೆಯಾಗುತ್ತಿತ್ತು. "ಹಾಳಾದ ಇವರನ್ನು ವಿವಾಹವಾದೆ. ಪಿಶಾಚಿಗಳು ! ಎಲ್ಲರೂ ಬಂಜೆಯರಾಗಿ ನನ್ನನ್ನೇ ಪರಿ ಕಷ್ಟಕ್ಕೀಡುಮಾಡಿ ಹೋದರು," ಮುಂತಾಗಿ. "ನೀವು ಈಗ ಮದುವೆಯಾದರೆ ನಾಳೆಯೇ ಆ ಹುಡುಗಿ ವಿಧವೆಯಾಗಬೇ

ಕಾದೀತಲ್ಲ !" ಎಂದು ಆಕ್ಷೇಪಿಸಿದರೂ ರಾಯರೇನೂ ಹಿಂದೆಗೆಯುತ್ತಿರಲಿಲ್ಲ. "ಏನಯ್ಯಾ, ವಿಧವೆ ಎನ್ನುತ್ತೀರಿ ! ಲೋಕದಲ್ಲಿ ಗಂಡ ಸತ್ತ ಹೆಂಡಿರು ಎಷ್ಟಿಲ್ಲ ! ಹುಡುಗಿಯು ಕೊನೆತನಕವೂ ಸುಮಂಗಲಿಯೇ ಆಗಿರಬೇಕೆಂಬುದು ಎಲ್ಲಿಯ ನ್ಯಾಯ ! ನೀವೇನೋ ಹೇಳುತ್ತಾ ಇದ್ದೀರಿ, ನಾನು ಮುದುಕನಾಗಿದ್ದೇನೆ. ಬೇಗ ಸಾಯ್ತೇನೆ ಅಂತ. ಆದರೆ, ಐವರನ್ನು ಮದುವೆಯಾದೆ ಅವರೇ ಸತ್ತರಲ್ಲದೆ ನಾನಿನ್ನೂ ಕಬ್ಬಿಣದ ಹಾಗಿದ್ದೇನೆ. ನನ್ನನ್ನು ಮದುವೆಯಾಗುವವರಿಗೆಲ್ಲಾ, ಸುಮಂಗಲಿಯ ಸೌಭಾಗ್ಯದಲ್ಲೇ ಸಾಯುವ ಯೋಗ್ಯತೆಯಿರುವಾಗ, ಸುಮ್ಮನೆ ಏನಾದರೂ ಬಡಕೊಳ್ಳುತ್ತಿದ್ದೀರಲ್ಲಾ ! ಮುದುಕನ ಮೇಲೇಕೆ ನಿಮ್ಮ ಕಣ್ಣೋಂಜಲು ?" ಎಂದು ಮುಂತಾಗಿ ಉಪನ್ಯಾಸ ಮಾಡಿಬಿಡುತ್ತಿದ್ದರು. ರಾಯರ ವಾದವೂ ಸರಿ ; ಅವರ ಆಯುಷ್ಯರೇಖೆ ಊರವರಿಗೇನೂ ಗೊತ್ತಿಲ್ಲ. ಆದರೂ, ಆಯುಸ್ಸಿದ್ದರೆ ಬದುಕುತ್ತೇವೆಂದು ಯಾರಾದರೂ ವಿಷಪಾನ ಮಾಡುತ್ತಾರೆಯೇ ?

× × × × ×

ಮೂರು ತಿಂಗಳು ಬಂದರ ಮೇಲೊಂದಾಗಿ ಉರುಳಿ ಹೋಯಿತು. ರಾಯರ ಪ್ರಯತ್ನವು ಅದು ತನಕ ಸಫಲವಾಗಲಿಲ್ಲ. ಅದಕ್ಕೆ 'ಖಾದಿ ಟೋಪಿ'ಗಳೇ ಬಹು ಮಟ್ಟಿಗೆ ಕಾರಣರೆನ್ನಬೇಕು. ಇದೀಗ ನಾಲ್ಕನೆಯ ತಿಂಗಳು. ಒಂದು ಭಾನುವಾರ, 'ಖಾದಿ'ಗಳೆಲ್ಲ ಕಛೇರಿಯಲ್ಲಿ ಕುಳಿತುಕೊಂಡಿದ್ದರೆ, ರಾಯರು ತಮ್ಮ ಕಾರ್ಯದಲ್ಲಿ ಜಯಶೀಲರಾದರೆಂಬ ವಾರ್ತೆ ಬಂದು ತಲುಪಿತು. ಅಲ್ಲಿಂದ ಅದು ಆಕಾಶವಾಣಿಯಂತೆ ಊರಿಗೆಲ್ಲ ಹರಡಿತು. ಈ ವಾರ್ತೆಯನ್ನು ಕೇಳಿ, 'ಮುದುಕ ಪರವಾಯಿಲ್ಲ' ಎಂದವರೇ ಊರಿನಲ್ಲಿ ಅಧಿಕಾಂಶ.

ಅದೇ ಸಂಜೆ, ರಾಯರು ತಮ್ಮ ಕೊಟಡಿಯಲ್ಲಿ ಆರಾಮ ಖುರ್ಚಿಯಲ್ಲಿ ನಶ್ಯ ತೀಡುತ್ತಾ ಕುಳಿತಿದ್ದರು. ಆಗ ಸೇವಕ ಮಾದ ಬಂದ. ಆ ಹೊತ್ತಿನಲ್ಲಿ ಮಾದನು ಊರಿನ ವಿಶೇಷ ವರ್ತಮಾನಗಳನ್ನು ತಂದು ರಾಯರಿಗೆ ವರದಿ ಒಪ್ಪಿಸುವದು ರೂಢಿಯಾಗಿತ್ತು. ರಾಯರು ತಲೆಯೆತ್ತಿ, ಮುಗುಳ್ನಗುತ್ತಾ, 'ಏನೋ ಮಾದ ವಿಶೇಷ ?' ಎಂದರು.

'ಅಂತೂ ನೀವು ಈ ಮದುವೆಯಲ್ಲೂ ಸಫಲರಾಗುವುದು ಅಸಂಭವ

ಅಂತ ಕಾಣುತ್ತದೆ. ನನಗೆ.' ಎಂದ.

'ಅದೇಕೆ ?'

'ಸುಂದರರಾಯರು ದಾರಿಯಲ್ಲಿ ನಿಬ್ಬಣ ನಿಲ್ಲಿಸಿ ಬಿಡುತ್ತಾರಂತೆ. ಅದು ಸಾಗದಿದ್ದರೆ ಹುಡುಗಿಯನ್ನೇ ಹಾರಿಸಿ ಬಿಡುತ್ತಾರಂತೆ' ಎಂದ ಮಾದ. ಮುಂದು ವರಿಯುತ್ತಾ ಸುಂದರರಾಯನು ತನ್ನ ಕಾರ್ಯ ಸಾಧನೆಗೋಸ್ಕರ ಕೆಲವು 'ಪೋಲಿ ಜನರ' ನ್ನು ಕೂಡಹಾಕಿದುದು, ಇತ್ಯಾದಿಗಳನ್ನು ತಿಳಿಸಿದನು.

ರಾಯರು ಕ್ಷಣ ಕಾಲ ಸುಮ್ಮನಿದ್ದರು. ಬಳಿಕ ತಾತ್ಸಾರ ಸೂಚಕವಾದ ನಗುವನ್ನು ನಕ್ಕು 'ಮಾದ, ನೀನು ಹುಲ್ಲು ಬಿದ್ದರೆ ಹಲ್ಲು ಬಿತ್ತೆನ್ನುವ ಜಾತಿಗೆ ಸೇರಿದವನು. ಇಷ್ಟೊಂದು ಅಲ್ಪ ವಿಚಾರಕ್ಕೆ ಬೆದರಿ ಕುಳಿತರೆ, ಊರಲ್ಲಿ ಬಾಳ್ವೆ ಮಾಡುವದು ಸಾಧ್ಯವೇ ?' ಎಂದು ಮುಗಿಸಿದರು.

ಆ ಸಮಯದಲ್ಲಿ ಅವರ ಮನಸ್ಸಿನಲ್ಲಿ ಮಿಂಚಿದ ಕುಟಿಲೋಪಾಯ ಮಾದನ ಪೊಳ್ಳು ತಲೆಗೆ ಹಿಡಿಯಲೇ ಇಲ್ಲ.

× × × ×

ಆರು ತಿಂಗಳು ಕಳೆದು ಹೋದವು. ಈ ಆರು ತಿಂಗಳ ಹಿಂದೆಯೇ ರಾಯರು ಊರನ್ನು ಬಿಟ್ಟು ಹೋಗಿದ್ದರು. ಎಲ್ಲಿಗೆಂಬುದು ಯಾರಿಗೂ ಗೊತ್ತಿರಲಿಲ್ಲ. ಅವರ ನೆಚ್ಚಿನ ಬಂಟ ಮಾದನಿಗೆ ಕೂಡಾ ತಿಳಿದಿರಲಿಲ್ಲ. ಹೋಗು ವಾಗೇನೋ ರಾಯರು ಮಾದನೊಡನೆ, ಆರು ತಿಂಗಳ ಮೇಲೆ ವಾಪಸ್ಸು ಬರು ತ್ತೇನೆಂದು ಹೇಳಿದ್ದರು. 'ಎಲ್ಲಿಗೆ' ಎಂದು ಆಗ ಅವರನ್ನು ಕೇಳುವ ಎದೆಗಾರಿಕೆ ಮಾದನಿಗಿರಲಿಲ್ಲ. ಹಾಗಾಗಿ ರಾಯರ ಸಂಚಾರದ ಗುರಿ ಯಾರಿಗೂ ಗೊತ್ತಾ ಗಲಿಲ್ಲ.

ರಾಯರು ಹೇಳಿದ ಅವಧಿ-ಆರು ತಿಂಗಳುಗಳು-ಮುಗಿಯಿತು. ಆದರೂ ರಾಯರು ಕಾಲಕ್ಲಪ್ತತೆಯನ್ನನುಸರಿಸಲಿಲ್ಲ. ಮಾದನೇನೋ ಇದನ್ನು ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳದೆ ತನ್ನ ಪಾಡಿಗೆ ತಾನಿದ್ದ.

ಮೂರು ನಾಲ್ಕು ದಿನ ಕಳೆದಿರಬಹುದು. ಅಂದು ಆದಿತ್ಯವಾರವಾದುದ ರಿಂದ ವಾರಪತ್ರಿಕೆ 'ಬಂಧು' ಪ್ರಕಟವಾಗಿತ್ತು! ಮೊದಲ ಪುಟದಲ್ಲೇ ಇದ್ದ ಶೀರ್ಷಿಕೆ ವಾರ್ತೆಯನ್ನೋದಿ ಊರಿಗೆ ಊರೇ ಚಕಿತವಾಯಿತು. ವಿಶೇಷ ವರ್ತ ಮಾನವೊಂದು ಆಕಸ್ಮಿಕವಾಗಿ ತಿಳಿದರೆ ಅದು ಸಂತೋಷದಾಯಕವಾಗಲೀ,

ದುಃಖದಾಯಕವಾಗಲೀ, ಒಮ್ಮೆ ಸಿಡಿಲು ಬಡಿದ ಹಾಗಾಗುತ್ತದೆ. ಹಾಗೆಯೇ ಇಂದೂ ಆಯಿತು. ವಾರ್ತೆಯೇನೋ ಸಂತೋಷದಾಯಕವಾದುದೇ ! ರಂಗ ರಾಯರು ಹೆಣ್ಣೊಂದನ್ನು ದತ್ತ ಸ್ವೀಕಾರ ಮಾಡಿಕೊಂಡ ವಿವರ. ವಾರ್ತೆಯೊಂದಿಗೆ ಸಂಪಾದಕ ತನ್ನ ಕೆಲವೊಂದು ಮಾತುಗಳನ್ನೂ ಸೇರಿಸಿದ್ದ; 'ರಾಯರು ಬಡ ಕುಟುಂಬವನ್ನು ಉದ್ಧರಿಸಿದರು.' ಇತ್ಯಾದಿ ಇದಕ್ಕೆ ಕಾರಣವಾಗಿ ಅನೇಕ ತರ್ಕವಿತರ್ಕಗಳೂ ಹುಟ್ಟಿಕೊಂಡವು, ಸಂಪಾದಕನ ಬಳಿಗೆ ಹೋಗಿ ಸುದ್ದಿ ಸುಳ್ಳಲ್ಲವೆಂದು ಖಚಿತಪಡಿಸಿಕೊಂಡು ಬಂದುದಾಯಿತು.

'ಮುದುಕ ಹುಚ್ಚುಚ್ಚು; ಬಹುಶಃ ಏನೋ ಆಗಿರಬೇಕು.' ಎಂದೊಬ್ಬ ಖಾದಿಯೇ ಹೇಳಿದ.

"ಹುಚ್ಚು-ಹೆಚ್ಚೇನೂ ಅಲ್ಲ; ಹುಡುಗಿಯನ್ನು ಹಾಕುತ್ತೇವೆಂದ ನಮ್ಮ ಮಾತು ಚಳಿಜ್ವರ ಹಿಡಿಸಿರಬೇಕು." ಎಂದು ಸುಂದರರಾಯನು ನಕ್ಕನು.

"ಹೇಗೂ ಇರಲಿ, ನಾವೇ ವಿಜಯಿಗಳಾದೆವಷ್ಟೆ !" ಎಂದು ಮತ್ತೊಬ್ಬ ನಕ್ಕ.

"ಅಷ್ಟೇ ; ಅಷ್ಟೇ ! " ಎಂದು ಎಲ್ಲರೂ ಅವನನ್ನನುಕರಿಸಿದರು.

ಆ ದಿನ ಎಲ್ಲಿ ನೋಡಿದರೂ ಅದೇ ಮಾತಾಗಿತ್ತು. ಬಳ್ಳಿಯಲ್ಲಿ ಹಬ್ಬಿಕೊಂಡ ಮಲ್ಲಿಗೆಯಂತೆ, ಎಲ್ಲರಿಗೂ ಅದರಿಂದ ಸಂತೋಷವಾಯಿತೇ ಹೊರತು ದುಃಖವಾಗಲಿಲ್ಲ. ಆದರೆ ಪುತ್ರ ಪುತ್ರನೆಂದು ಒದ್ದಾಡುತ್ತಿದ್ದ ರಾಯರು ಹೆಣ್ಣನ್ನು ದತ್ತುಪಡೆದುಕೊಂಡುದೆಂದು ಕೇಳಿ ಸ್ವಲ್ಪ ಸಂಶಯಕ್ಕೆಡೆಯಾಯಿತು. ಅದಕ್ಕೆ ಜನರು, 'ರಾಯರಿಗೆ ಮುಂಚಿನಿಂದಲೂ ಹೆಂಗಸರ ಮೇಲೆ ಅಪಾರವಾದ ಮಮತೆಯೆಂದೂ, ಅಥವಾ ಹುಡುಗರನ್ನು ಯಾರೂ ದತ್ತು ಕೊಡಲು ಸಮ್ಮತಿಸಲಿಲ್ಲವೋ, ಏನೋ ? ' ಎಂದೂ ಬಗೆ ಬಗೆಯ ಮಾತುಗಳಿಂದ ತಮ್ಮನ್ನು ತಾವೇ ಸಂತವಿಸಿಕೊಂಡರು.

ಆದಾಗಿ ಹದಿನೈದು ದಿನಗಳ ಮೇಲೆ ರಾಯರು, ಸಾಕುಮಗಳೊಡನೆ ಊರಿಗೆ ಚಿತ್ತೈಸುವರೆಂಬ ಸುವಾರ್ತೆ ಹರಡಿತು. ಆ ದಿನ ಎಲ್ಲರ ಸಡಗರವೇ, ಸಡಗರ! ಎಲ್ಲರ ಸಡಗರಕ್ಕಿಂತಲೂ, ಒಂದು ತೂಕ ಹೆಚ್ಚು ಸುಂದರರಾಯನ ಸಡಗರ. ಊರಿಗೊಂದೇ ಆದ ಗಾಂಧೀ ರಸ್ತೆಯಲ್ಲಿ ಇಕ್ಕೆಲಗಳಲ್ಲೂ ತಳಿರು,

ತೋರಣಗಳು; ಹತ್ತು ಹತ್ತು ಗಜದೂರದಲ್ಲಿ ದ್ವಾರಗಳು; ಅವುಗಳಿಗೆಲ್ಲಾ ಬಗೆ ಬಗೆಯ ಕಾಂತಿ ಮಿನುಗುವ ದೊಡ್ಡಕ್ಷರಗಳಲ್ಲಿ ರಂಗರಾಯರ ಹೆಸರು ; ಅವರ ಭಾವಚಿತ್ರ. ಊರಿಗೆ ಬರುವವನು ಪೋರನಾದರೂ ದೊರೆಗೆ ಹೇಳಿಸಿದ ಸ್ವಾಗತ. ಕ್ಷಣಕಾಲದ ಹಿಂದೆ ರಾಯರ ಮೇಲೆ ಕತ್ತಿ ಮಸಿಯುತ್ತಿದ್ದವರೇ ಕೇವಲ ಒಂದು ಕ್ಷುಲ್ಲಕ ವಿಚಾರದ ಪರಿವರ್ತನದಿಂದಾಗಿ, ಅವರಿಗೆ ಆರತಿಯೆತ್ತುವುದನ್ನು ಹೊರಗಿನವರಾರಾದರೂ ನೋಡಿದ್ದಲ್ಲಿ ಊರವರ ಮೌಢ್ಯತೆಗೆ ನಗದಿರುತ್ತಿರಲಿಲ್ಲ.

ಸಾಧಾರಣ ಹತ್ತು ಗಂಟೆಗೆ ರಾಯರ ಸವಾರಿ ಕಾರಿನಲ್ಲಿ ಚಿತ್ತೈಸಿತು. ಊರಗಡಿಯ ದ್ವಾರದಲ್ಲಿ ಪಂಚಮಹಾವಾದ್ಯಗಳೊಡನೆ 'ಖಾದೀ ಟೋಪಿ'ಗಳು ನಿಂತಿದ್ದರು. ರಾಯರ ಎಡಪಕ್ಕದಲ್ಲಿ ಸುಶೀಲೆ ಕುಳಿತಿದ್ದಳು. ಮೊದಲೇ ಶೋಕಾಬ್ಧಿಯಲ್ಲಿ ತೇಲಾಡುತ್ತಿದ್ದಳು. (ಅವಳ ದುಃಖದ ಕಾರಣವನ್ನು ಇಲ್ಲಿ ಹೇಳುವದಿಲ್ಲ. ಹೇಳಿದರೆ ಕಥೆಯ ಸ್ವಾರಸ್ಯ ಕೆಡುತ್ತದೆ. ಕಾರಣ ಮುಂದೆ ತಾನಾಗಿಯೇ ಗೊತ್ತಾಗುತ್ತದೆ) ಈ ವಾದ್ಯಗಳ ಚಂಡ ಧ್ವನಿಯನ್ನು ಕೇಳಿ ಬೆಕ್ಕಸಂ ಬೆರಗಾದಳು. ಒಬ್ಬ 'ಖಾದಿ ಟೋಪಿ' ಕೆಂಪು ಹೂವಿನ ಮಾಲೆಯನ್ನು ತಂದು ಕೊರಳಿಗೆ ಹಾಕಿದಾಗಂತೂ, ತನ್ನನ್ನು ಬಲಿಗೊಡಲು ಮಾರೀಗುಡಿಗೆ ಕೊಂಡುಹೋಗುತ್ತಿದ್ದಾರೇನೋ ಎನ್ನಿಸಿತು. ಆದರೆ, ಅವಳ ಆಲೋಚನೆಗಳನ್ನೆಲ್ಲಾ ಮೀರಿ ವಾದ್ಯತರಂಗಗಳು ಮುತ್ತುತ್ತಿದ್ದವು.

ಸುಶೀಲೆಯನ್ನು ನೋಡಿ ಸುಂದರರಾಯನ ವಿಸ್ಮಯಕ್ಕೆ ಪಾರವೇ ಉಳಿಯಲಿಲ್ಲ. ಅವನು ನೋಡಿದ್ದು ಸುಶೀಲೆಯನ್ನಲ್ಲ; ಸೌಂದರ್ಯದ ಖನಿಯನ್ನು. ಆಗಲೇ ಅವನ ಮನಸ್ಸಿನಲ್ಲಿ ಮುಂದೆ ಬೆಳೆಯುತ್ತಾ ಬಂದ ಆಶಾಂಕುರವು ಮೊಳೆತುದು.

ಅಂದಿನಿಂದ ಸಾಧಾರಣ ನಾಲ್ಕಾರು ದಿನಗಳ ವರೆಗೆ ರಾಯರಿಗೆ ಬಿಡುವೇ ಇರಲಿಲ್ಲ. ಎಲ್ಲರೂ ಬಂದು ಅಭಿನಂದಿಸುವವರೇ ! 'ಖಾದೀ ಟೋಪಿ'ಗಳ ಪರವಾಗಿ ಅಭಿನಂದಿಸಲು ಸ್ವತಃ ಸುಂದರರಾಯನೇ ಬಂದ. ಅವನನ್ನು ನೋಡಿ ರಾಯರು ತಾತ್ಸಾರದಿಂದ ನಕ್ಕರು.

ಸುಂದರರಾಯನೇ, “ ರಾಯರೇ ! ನೀವು ಹೀಗೆ ನಿಮ್ಮಿಚ್ಛೆಯನ್ನು ಪಲ್ಲಟ ಮಾಡಿದುದಕ್ಕೆ ತುಂಬಾ ವಂದನೆಗಳು. ” ಎಂದ.

“ಧನ್ಯನಾದೆ ” ಎಂದು ಮಾತ್ರ ರಾಯರು ಹೇಳಿ ಮುಗಿಸಿದರು.

“ನೋಡಿ; ಹಿಂದೆ ನೀವು ಮದುವೆಯಾಗುತ್ತೇನೆಂದಾಗ, ನಾನು ಕಿರು ನುಡಿಗಳನ್ನಾಡಿರಬಹುದು. ಅದಕ್ಕಾಗಿ ನನ್ನನ್ನು ಕ್ಷಮಿಸಬೇಕು ಆದರೆ, ನಿಮ್ಮ ಶ್ರೇಯಸ್ಸಿಗಾಗಿಯೇ ಹಾಗೆ ಮಾಡಬೇಕಾಯಿತು. ಔಷಧಿ ಕಹಿಯೆಂದು ಅದನ್ನು ಸೇವಿಸದೆ ಹೋದಲ್ಲಿ ಆರೋಗ್ಯ ಲಾಭವಾದೀತೇ ?”

ರಾಯರು, ಹೆ, ಹೆ, ಎಂದು ನಗುತ್ತಾ, “ಸರಿ, ಅದರಲ್ಲೇನಪ್ಪ. ಹಿಂದಿನ ದೆಲ್ಲಾ ಈಗ್ಯಾಕೆ ? Let the dead past bury its dead. ನಾನೂ ಬೈದಿದ್ದೇನೆ, ನೀನೂ ಬೈದಿದ್ದೀ. ಆ ಜಗಳಗಳ ಪ್ರಸ್ತಾಪ ಈಗೇಕೆ ? ” ಎಂದರು.

× × × × ×

ರಾಯರ ಸಾಕು ಮಗಳು ಸುಶೀಲೆಗೆ ವಿವಾಹದ ವಯಸ್ಸಾಗಿದ್ದರೂ, ವಿವಾಹವಾಗಿರಲಿಲ್ಲ. ಇದರಿಂದ ನಮ್ಮೂರ ಜವ್ವನಿಗರಿಗೆಲ್ಲಾ ಬಹಳ ಆನಂದ. ಎಲ್ಲರೂ ತಮ್ಮ ಜಾಲವನ್ನು ಸುಶೀಲೆಯ ಕಡೆಗೊಗೆದಿದ್ದರು. ಆದರೆ ಅದು ಹೂ ವಿನ ಸೌಂದರ್ಯಕ್ಕಾಗಿ ಮಾತ್ರ ಅಲ್ಲ, ಹೂವಿನಲ್ಲಿರುವ ಜೇನಿಗಾಗಿ . ರಾಯರು ಕೋಟ್ಯಾಧೀಶ್ವರರೆಂದು ಹಿಂದೆಯೇ ಹೇಳಿರುವೆನಷ್ಟೆ !

÷ ÷ ÷ ÷ ÷

ಅಂದಿಗೂ, ಇಂದಿಗೂ, ನಾಲ್ಕು ತಿಂಗಳುಗಳು ಸಂದು ಹೋಗಿವೆ. ಈ ಅವಧಿಯಲ್ಲಿ ರಾಯರು ಸುಶೀಲೆಯನ್ನು ಯಾವ ಸಾರ್ವಜನಿಕ ಕೂಟಕ್ಕೂ ಕರೆ ದೊಯ್ದವರಲ್ಲ. ಸುಶೀಲೆಗೆ ಹೆಚ್ಚಾಗಿ ಮನೆಯಿಂದ ಹೊರಗೆ ಕಾಲಿಡುವುದು ಬೇಡವಾಗಿತ್ತು. ರಾಯರೂ, ಯಾವುದೋ ಕಲ್ಪನೆಯಿಂದ, ಹಾಗೆ ಹೆಚ್ಚಾಗಿ ಅವಳನ್ನು ಸಾರ್ವಜನಿಕರೆದುರಿಗೆ ಪ್ರದರ್ಶಿಸುವುದು ಅಪಾಯವೆಂಬ ಅಭಿಪ್ರಾ ಯವನ್ನಿಟ್ಟುಕೊಂಡಿದ್ದರು.

ಆಗ, ವರ್ಷಾಕಾಲ ಆರಂಭವಾಗಿತ್ತು. ಹಗಲಿರುಳೆನ್ನದೆ ಧಾರಾಕಾರವಾಗಿ ಸುರಿಯುತ್ತಿದ್ದ ಬಲ್ಸರಿಯ ಜಲಸೇಚನದಿಂದ, ಮನೆಯ ಗೋಡೆಗಳಿಗೂ ‘ಶೀತಜ್ವರ’ ದ ಅನುಭವವಾಗಿತ್ತು. ರಾಯರಿಗೆ, ಎಂಥ ಮಳೆ-ಹೊಳೆಯಾ ದರೂ, ಮನೆಯ ಹೊರಗೇ ಇರಬೇಕಾಗಿತ್ತು. ಮಳೆ ಅಂಗಿ, ಟೋಪಿಗಳ ಮಹಿ ಯಿಂದ, ಹಾಗೆ ತಿರುಗಾಡಿದರೂ, ಅವರಿಗೇನೂ ಅದರಿಂದ ಬಾಧಕವಿರಲಿಲ್ಲ.

ಆದರೆ, ಈ ಸರಿಮಳೆಯಿಂದ ಕೇಡುಂಟಾದುದು ಸುಶೀಲೆಗೆ. ಮಳೆಗಾಲದ ಆರಂಭಕ್ಕೆ ರಾಯರ ಅಡಿಗೆಯವನು ಹೇಳದೆ ಕೇಳದೆ ಫರಾರಿಯಾಗಿದ್ದ. ರಾಯರು ಬೇರೆ ಬಾಣಸಿಗನನ್ನು ಹುಡುಕಿ, ಹುಡುಕಿ ಬೇಸತ್ತಿದ್ದರು. ಅಡಿಗೆಯ ಕಾರ್ಯಕಲಾಪಗಳನ್ನು ಕೊಂಚಕಾಲ ಸುಶೀಲೆಯೇ ನೋಡಿಕೊಳ್ಳಬೇಕಾಯಿತು. ಅದರೊಡನೆ ಅಂಗಳಕ್ಕೂ ಇಳಿಯಬೇಕಾಗಿತ್ತು. ಅಂಗಳಕ್ಕೆ ಇಳಿಯುವಷ್ಟು ಬಾರಿಯೂ ಛತ್ರಿಯನ್ನು ಉಪಯೋಗಿಸಿಕೊಳ್ಳುವದು ಸಾಧ್ಯವೇ ? ಆದರಿಂದ ಸುಶೀಲೆಗೆ ದಿನಕ್ಕೆ ನಾಲ್ಕಾರು ಬಾರಿಯಾದರೂ ಮಳೆಸ್ನಾನವಾಗುತ್ತಿತ್ತು. ಮಳೆಸ್ನಾನವೂ ಕ್ಷಿಪ್ರದಲ್ಲೇ ತನ್ನ ಪ್ರಾಬಲ್ಯವನ್ನು ತೋರಿಸಿತು.

ಒಂದು ದಿನ ಸಂಜೆ, ನಾಲ್ಕೂವರೆ ಗಂಟೆಗೆ ರಾಯರು ಮನೆಗೆ ಹಿಂದಿರುಗುವಾಗ ಸುಶೀಲೆ ಮಲಗಿಕೊಂಡಿದ್ದಳು. ಶೀತಜ್ವರದಿಂದ ಮೈ ಇಂಗಳದಂತಾಗಿತ್ತು. ಆ ಊರೇನೋ ಮೆಲ್ಲ ಮೆಲ್ಲನೆ ನಾಗರಿಕತೆಯ ಕಡೆಗೆ ಹೆಜ್ಜೆಯಿಡುತ್ತ ಬಂದಿದ್ದರೂ, ಸರಕಾರದವರು ಇನ್ನೂ ಅಲ್ಲಿ ಆಸ್ಪತ್ರೆಯನ್ನು ಕಟ್ಟಿಸುವ ಗೋಜಿಗೆ ಹೋಗಿರಲಿಲ್ಲ. ಇಂಗ್ಲೀಷ ಡಿಗ್ರಿಹೊತ್ತ ಡಾಕ್ಟರರೂ ಇರಲಿಲ್ಲ. ಅಲ್ಲಿಂದ ನಾಲ್ಕು ಮೈಲು ದೂರದ ಊರಿನಲ್ಲಿ ಒಬ್ಬ ಡಾಕ್ಟರರೇನೋ ಇದ್ದರು. ಅವರು ಖಾಸಗಿ ಡಾಕ್ಟರರು. ವಾಹನವನ್ನು ಸಿದ್ಧಪಡಿಸಿಕೊಂಡೇ ಹೋದರೂ, ಆ ಡಾಕ್ಟರರು ತಾವು ಮನಸ್ಸು ಮಾಡಿದರೇನೇ ಬರುತ್ತಿದ್ದರು. 'ಊರಿನಲ್ಲೇ ಖಾದಿಮುಖಂಡ' ಸುಂದರರಾಯನಿದ್ದನು. ಎರಡು ವರ್ಷಗಳ ಹಿಂದೆ L. I. M. ಪರೀಕ್ಷೆಗೆಂದು ಮದ್ರಾಸಿಗೆ ಹೋಗಿ ಸಾಗದೆ ಊರಿಗೆ ಹಿಂದೆ ಬಂದು ಖಾದಿಯಾಗಿದ್ದನು. ರಾಯರು ಯೋಚಿಸಿ, ಫೇಲಾದರೂ ಇತರ ಅಣಲೆಕಾಯಿ ಪಂಡಿತರಿಗಿಂತ, ಇಂಗ್ಲಿಷ್ ಡಾಕ್ಟರನೇ ವಾಸಿ ಎಂದು ಸುಂದರರಾಯನನ್ನು ಕರೆಸಿಕೊಂಡರು.

ಸುಂದರರಾಯನಿಗೂ ಅಷ್ಟೇ ಬೇಕಾಗಿತ್ತು. ಕರೆ ಬಂದ ತತ್ಕ್ಷಣವೇ ಹೊರಟು ಬಂದನು. "ಜ್ವರವು ಅಷ್ಟೇನೂ ಭಯಾನಕವಾಗಿಲ್ಲ. ಒಂದು ತಿಂಗಳ ಚಿಕಿತ್ಸೆಯಿಂದ ಸೌಖ್ಯವಾದೀತು." ಎಂದು ರಾಯರ ದುಗುಡವನ್ನು ನಿವಾರಿಸಿದನು. ಆ ಮೇಲೆ ದಿನ ದಿನವೂ ರೋಗಿಯನ್ನು ಪರೀಕ್ಷಿಸಲು ಬರತೊಡಗಿದನು. ಚಿಕಿತ್ಸೆಯಲ್ಲೇನೂ ಬದಲಾವಣೆಯಿರಲಿಲ್ಲ. ಜ್ವರವೂ ಇಳಿದೆಸೆಯಲ್ಲಿತ್ತು. ಆದರೂ, ಸುಂದರರಾಯನೂ ರೋಗಿಯ ದೈನಿಕ ಸಂದರ್ಶನವನ್ನು

ಮಾಡುತ್ತಿದ್ದನು. ಆದರ ಉದ್ದೇಶವೇ ಬೇರೆಯಾಗಿತ್ತು ಆದುದರಿಂದಲೇ, ರಾಯರು ಚಿಕಿತ್ಸಾಫಲವನ್ನಿತ್ತಾಗ ಅವನು ಅದನ್ನು ಸ್ವೀಕರಿಸದಿದ್ದುದು.

ಒಂದು ತಿಂಗಳು ಸಂದಿತು ; ಸುಶೀಲೆ ಜ್ವರವನ್ನು ನೀಗಿ ಮೊದಲ ಸ್ಥಿತಿಗೇ ಬಂದಿಳಿದಳು. ರಂಗರಾಯರು ಅನೇಕ ವಿಧವಾಗಿ ಸುಂದರರಾಯ ನನ್ನು ಪ್ರಶಂಸಿಸಿದರು. ಸುಶೀಲೆಯ ಈ ರೋಗದಿಂದ ಸುಂದರರಾಯನ ಭಾಗ್ಯೋದಯವಾಯಿತೆನ್ನಬೇಕು. ಇದು ತನಕ ಎಣ್ಣೆ ಸೀಗೆಕಾಯಂತಿದ್ದ ರಾಯರುಗಳು ಹಾಲು-ನೀರಿನಂತಾದರು; ಇಬ್ಬರೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಏಕತ್ರವಾಗಿ ದುಡಿಯತೊಡಗಿದರು. ಸುಂದರರಾಯನಿಗೆ, ರಂಗರಾಯರ ದ್ರವ್ಯ ಬೆಂಬಲ, ವ್ಯಕ್ತಿ ಬೆಂಬಲಗಳು ದೊರೆತು, ಅವನೊಬ್ಬ ಪ್ರಸಿದ್ಧ ಗಣ್ಯ ವ್ಯಕ್ತಿಯಾದನು.

ರಂಗರಾಯರು ಮುಂದುವರಿದ ಮನುಷ್ಯರಾಗಿದ್ದರೂ, ಸುಶೀಲೆಯನ್ನು ಮನೆಯೊಳಗೇ ಅಡಗಿಸಿಡುವದು ಸುಂದರರಾಯನಿಗೆ ಬಹಳ ವಿಚಿತ್ರವಾಗಿ ಕಂಡಿತು. ಸುಶೀಲೆ ಊರಿಗೆ ಬಂದು ಆರು ತಿಂಗಳುಗಳಾಗಿದ್ದವು. ಆದರೂ ಅವಳಿಗೆ ಊರಿನ ದಿಗ್ದೆಸೆಗಳೊಂದೂ ಗೊತ್ತಿರಲಿಲ್ಲ. ವ್ಯಕ್ತಿ, ಮೃಗ, ಪಕ್ಷಿಗಳ ಪರಿಚಯ ವಿರಲಿಲ್ಲ; ಗುಡ್ಡ, ಬೆಟ್ಟಗಾಡು, ನದಿ, ದರಿ, ಗಿರಿ, ವನಗಳ ಸೌಂದರ್ಯವನ್ನು ಸವಿದು ಅಭ್ಯಾಸವಿರಲಿಲ್ಲ. ಅಡುಗೆ ಮನೆಯ ಅನ್ನಪೂರ್ಣೆಯಾಗಿರದಿದ್ದರೂ, ಮನೆಯ ಅನ್ನಪೂರ್ಣೆಯಾಗಿದ್ದುದು ನಿಜ. ಸುಂದರರಾಯನು ರಂಗ ರಾಯರ ಅಚ್ಚುಮೆಚ್ಚಿನ ಬಂಟನಾದ ಮೇಲೆ, ಮೆಲ್ಲನೆ ಈ ಪ್ರಸ್ತಾಪಕ್ಕೆ ಕೈ ಹಾಕಿದನು, "ಏನು ರಾಯರೇ ! ನಿಮ್ಮ ಮಗಳಿಗೆ ರಜಪೂತರಂತೆ ಘೋಷಾ ಪದ್ಧತಿಯುಂಟೇ ?" ಎಂದು ಮುಂತಾಗಿ ಸಂದರ್ಭಕ್ಕನುಗುಣವಾಗಿ ಕೀಟಲೆಯ ಪ್ರಶ್ನೆ ಹಾಕುತ್ತಿದ್ದನು. ರಾಯರು, ಅವುಗಳಿಗೆಲ್ಲಾ ಉತ್ತರಗೊಡುವ ಹೊಲಬುಗಾಣದೆ, ಮೆಲ್ಲ ಮೆಲ್ಲನೆ ಸುಶೀಲೆಯನ್ನು ಸಾರ್ವಜನಿಕ ಕ್ಷೇತ್ರಗಳಿಗೆ ಕರೆದೊಯ್ಯಬೇಕಾಯಿತು.

ಅಂದಿನಿಂದ, ಎಲ್ಲಿಗೆ ಹೋಗುವದಾದರೂ ಮೂವರೂ ಹೋಗುತ್ತಿದ್ದರು. ಸುಶೀಲೆ ಬಳಿಯಲ್ಲಿದ್ದಾಗ ಸುಂದರರಾಯನ ಮಾತಿನಲ್ಲಿ ಹುರುಪೂ, ಉತ್ಸಾ ಹವೂ, ಪ್ರಬಲವಾಗಿ ಸೇರಿಕೊಂಡು ಬಿಡುತ್ತಿತ್ತು. ಅದೇ ಸುಶೀಲೆಯಿಲ್ಲದಿದ್ದರೆ, ಮಾತಿನ ಪ್ರವಾಹವು ಬೇಸಿಗೆಯ ಕೆರೆಯಂತಾಗಿ ಬಿಡುತ್ತಿತ್ತು. ರಾಯರು

ಇವುಗಳನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿ ಅರಿತುಕೊಂಡಿದ್ದರು. ಸುಂದರ ರಾಯನ ಈ ಹುಚ್ಚಾಶೆಗಾಗಿ, ಅನೇಕ ಬಾರಿ ನಕ್ಕೂ ಇದ್ದರು. "ಈ ಮಹಾ ಮಹಿಮರೆಲ್ಲಾ, ಈ ಮುಂದಾಲೋಚನೆಯಿಂದಲೇ ತನಗೆ ಅತ್ಯಪೂರ್ವಸ್ವಾಗತ ವನ್ನು ಬಯಸಿದುದಿರಬೇಕು." ಎಂಬಾಲೋಚನೆಯೊಂದಿಗೇ ದೂರದ ಸಂದೇಹಾನ್ವಿತವಾದ ಅಂಜಿಕೆಯೊಂದು ಅವರ ಮನಸ್ಸನ್ನು ಕೊರೆಯುತ್ತಿತ್ತು.

ಕ್ರಮೇಣ ರಂಗರಾಯರು ವಿಹಾರ ಹೋಗುವುದನ್ನು ನಿಲ್ಲಿಸಿ ಬಿಟ್ಟರು. ವಯೋಧಿಕ್ಯದಿಂದ ಅವರನ್ನು ನಿಶ್ಶಕ್ತಿಯು ಪೀಡಿಸುತ್ತಿತ್ತು. ಇದರಿಂದಾಗ್ಯೂ ಸುಂದರರಾಯನ ಆನಂದಕ್ಕೆ ಪರಿಮಿತಿಯೇ ಇರಲಿಲ್ಲ. ಸುಶೀಲೆಯೊಂದಿಗೆ ನಿರ್ಭೀತಿಯಿಂದ ವಿಹಾರಕ್ಕೆ ಹೋಗುತ್ತಿದ್ದನು. ಅದರೊಂದಿಗೇ ಸಂದರ್ಭ ದೊರೆತಾಗ, ತನ್ನಾಶೆಯನ್ನು ಹೊರಗೆಡವಬಹುದೆಂಬ ಅಭಿಲಾಷೆ.

ಕೇಂದ್ರ ಮೈದಾನಿನಲ್ಲಿರುವ ಆಕಾಶವಾಣಿಯ ಗಾಯನವನ್ನೋ, ವಾರ್ತೆಯನ್ನೋ ಕೇಳಲು ಹೋಗುತ್ತಿದ್ದರು. ಅಲ್ಲಿಂದ ಅದು ಕೊನೆಗೊಳ್ಳುವ ವರೆಗೂ ಹಿಂದಿರುಗುತ್ತಿರಲಿಲ್ಲ. ಆಕಾಶವಾಣಿಯಲ್ಲವಾದರೆ, ಮಂಚಟಿ ಹಿತ್ತಲಿ ಗೋ, ಸುಲ್ತಾನ ಬತ್ತೇರಿಗೋ, ಬಾವುಟ ಗುಡ್ಡಕ್ಕೋ, ಕೆರೆಯ ದಂಡೆಗೋ ಹೋಗುತ್ತಿದ್ದರು. ಎಲ್ಲೆಡೆಯಲ್ಲೂ ಒಂದೊಂದು ಸೊಗಸು ; ಒಂದೊಂದು ವೈವಿಧ್ಯ ; ಒಂದೊಂದು ಸಂತೋಷ. ಸುಶೀಲೆಯ ರಸಾವೇಶವಾದ ಕಣ್ಣು ಗಳು ಆ ಸೊಬಗನ್ನು ಸವಿದು, ಮನೋಮುಕುರದಲ್ಲಿ ಶೇಖರಿಸಿಡುತ್ತಿದ್ದವು. ಸುಂದರರಾಯನು ಸುಶೀಲೆಯನ್ನು ಆ ಸ್ಥಳಗಳಿಗೆ ಕರೆದು ಕೊಂಡೊಯ್ಯುತ್ತಿದ್ದ ಉದ್ದೇಶವೇ ಬೇರೆ ! ತಮ್ಮಂತೆ ಇಬ್ಬರಾಗಿ ಬರುತ್ತಿದ್ದ ತರುಣ ಪ್ರಣಯಿಗಳ ಮೇಲೆ ಸುಶೀಲೆಯ ದೃಷ್ಟಿ ಹೊರಳುವಂತೆ ಆತನು ಯತ್ನಿಸುತ್ತಿದ್ದನು. ಆದರೆ ಸುಶೀಲೆಯ ಕಣ್ಣುಗಳು ತಿಳಿವಾನನ್ನೋ, ನೀರದಾಳಿಯನ್ನೋ, ದೂರದ ಬೆಟ್ಟ ಕಾಡುಗಳನ್ನೋ, ಮಂಜುಲ ನಿನಾದದಿಂದ ಮಂದಗಾಮಿನಿಗಳಾಗಿ ಹರಿಯು ತ್ತಿದ್ದ ತೊರೆಗಳನ್ನೋ, ಇನ್ನೂ ಬೇರೆ ಸೌಂದರ್ಯಮಯ ಚಿತ್ರಗಳನ್ನೋ ನಿರುಕಿಸುತ್ತಿದ್ದವು. ಅಲ್ಲಿ ನೆಟ್ಟ ದೃಷ್ಟಿಯನ್ನು ಬೇರೆ ಕಡೆಗೆ ಹೊರಳಿಸುವ ದೆಂದರೆ ಕಷ್ಟಸಾಧ್ಯವಾದ ಸಂಗತಿ.

\+ + + + +

ಒಂದು ಭಾನುವಾರ ; ಎಂದಿನಂತೆ ಸಂಜೆ ನಾಲ್ಕು ತಾಸಿಗೆ ಸರಿಯಾಗಿ

ಸುಂದರರಾಯನು ಕಾರನ್ನು ತೆಗೆದುಕೊಂಡು ಬಂದನು. ಸುಶೀಲೆ ಬಂದು ಕುಳಿತೊಡನೆಯೇ ಕಾರು ಬತ್ತೇರಿಯೆಡೆಗೆ ಸಾಗಿತು. ಇಬ್ಬರೂ ಅಗಣಿತವಾಗಿದ್ದ ಸೋಪಾನ ಪಂಕ್ತಿಗಳನ್ನು ಏರಿ, ಮೇಲೆ ಬಂದರು. ಏರುವಾಗ ಸುಶೀಲೆ ಪ್ರಯಾಸಸೂಚಕವಾದ ನುಡಿಗಳನ್ನುಸುರುತ್ತಿದ್ದಳು. ಸುಂದರರಾಯನು ಪ್ರತಿಯಾಗಿ ಮುಗುನಗುತ್ತಿದ್ದನು.

ಇಬ್ಬರೂ ಬತ್ತೇರಿಯ ಉತ್ತುಂಗಸ್ಥಾನವನ್ನೇರಿ, ಕ್ಷಣಕಾಲ ನಿಂತು, ಸುತ್ತಲೂ ನೋಡಿದರು. ದೂರದಲ್ಲಿ ನೀಲಸಾಗರವು ಭೋರ್ಗರೆಯುತ್ತಿತ್ತು ; ತೆರೆಗಳ ಅಲುಗಾಟವೂ, ನೊರೆನೊರೆಯಾಗಿ ತೇಲಿಬರುತ್ತಿದ್ದ ಪ್ರವಾಹವೂ ವಿಶದವಾಗಿ ದೃಗ್ಗೋಚರಿಸುತ್ತಿತ್ತು. ಅದರಿಂದಿತ್ತ ಸ್ವಲ್ಪ ಭಾಗದಲ್ಲಿ, ಬಿಸಿಲಿನಲ್ಲಿ ಕಾಸು ಬಿದ್ದುಕೊಂಡಿದ್ದ ಪುಳಿನರಾಶಿ ; ಅದರಿಂದಿತ್ತ ಬತ್ತೇರಿಯ ತನಕವೂ ವಿಸ್ತಾರವಾಗಿ ಹರಿಯುತ್ತಿದ್ದ ನದಿ ; ಕುಬೇರ ದೆಸೆಯಲ್ಲಿ ದಟ್ಟವಾಗಿದ್ದ ಕಾಡೊಂದು ; ತೆಂಕುದೆಸೆಯಲ್ಲಿ ನದಿಯ ನಿಡಮಾರ್ಗ ಸುಶೀಲೆ ನೋಡಿದಳು. ಮೂರು ನಾಲ್ಕು ಬಾರಿ ತಿರುಗಿ, ತಿರುಗಿ ನೋಡಿದಳು, ಯಾವುದೂ ಸಜೀವವಾಗಿರಲಿಲ್ಲ. ಎಲ್ಲವೂ ಜಡತ್ವದ ಮುಸುಕನ್ನೆಳೆದುಕೊಂಡಿದ್ದವು. ಸತತವೂ ಸಮುದ್ರದ ಮೇಲೆ ಹಾರುತ್ತಿದ ಬೆಳ್ಳಕ್ಕಿಯಿಂದಾಗಲೀ, ತೊರೆಯಲ್ಲಿ ಕ್ರೀಡಿಸುತ್ತಿದ್ದ ಓಡಗಳಾಗಲೀ, ಕಾಡಿನಿಂದ ಕೇಳಿ ಬರುತ್ತಿದ್ದ ಹಕ್ಕಿಗಳ ಇಂಚರವಾಗಲೀ, ಒಂದೂ ಇರಲಿಲ್ಲ.

" ಇವತ್ತೆಲ್ಲವೂ ಉದಾಸಿಯಾಗಿದೆ ; ಅಲ್ಲವೇ ? " ಎಂದು ಸುಂದರರಾಯನು ಸ್ವಲ್ಪ ಹೊತ್ತಿನ ಮೇಲೆ ಪ್ರಶ್ನಿಸಿದನು.

" ಹೌದು. " ಎಂದು ಮೃದುವಾಗಿ ಉತ್ತರವಿತ್ತಳು ಸುಶೀಲೆ.

ಸುಂದರರಾಯನು ಸದಾ ಪ್ರಣಯಿಗಳಿಂದ ಇಡಿಕಿರಿದಿರುತ್ತಿದ್ದ ಸ್ಥಳವು ನಿರ್ಜನವಾಗಿರುವುದನ್ನು ನೋಡಿ ಉದಾಸಿಯಾಗಿದೆ, ಎಂದಿದ್ದನು. ಸುಶೀಲೆ, ಪ್ರಕೃತಿಯು ಜಡವಾಗಿದ್ದುದನ್ನು ಕಂಡು ಹಾಗೆ ಹೇಳಿದ್ದಳು. ಅಂತೂ, ಬೇರೆ ಬೇರೆ ದೃಷ್ಟಿಯಲ್ಲಾದರೂ, ಇಬ್ಬರ ಅಭಿಪ್ರಾಯವೂ ಒಂದೇ ಆಗಿತ್ತು.

" ನಿಮಗೆ ನಾಟಕ ನೋಡುವುದರಲ್ಲಿ ಅಭಿರುಚಿಯಿದೆಯೇ ? " ಎಂದು ಮತ್ತೆ ಸುಂದರ ರಾಯನು ಕೇಳಿದನು.

" ಓಹೋ ! ನಾಟಕವೆಂದರೆ ನನಗೆ ಜೀವಾಳ. ಅಂಥ ಉತ್ತಮ ನಾಟಕ

ಯಾವುದಿದೆ, ಇವೊತ್ತು ? "

" ಗರುಡ ಸದಾಶಿವರಾಯರ, 'ವಿಷಮ ಜೀವನ' ; ಹೋಗೋಣವೇ ? ಈಗ ಗಂಟೆ ಐದು ; ಆರು ಗಂಟೆಗೆ ನಾಟಕ ಪ್ರಾರಂಭ. ಇನ್ನು ಮುಕ್ಕಾಲು ಗಂಟೆಯೊಳಗೆ ಅಲ್ಲಿಗೆ ಹೋಗಿ ಬಿಡಬಹುದು. " ಎಂದು ಕೈ ಗಡಿಯಾರವನ್ನು ನೋಡಿಕೊಂಡು ಹೇಳಿದನು.

ಸುಶೀಲೆ ತನ್ನ ಸಮ್ಮತಿಯನ್ನು ಸೂಚಿಸಿದಳು. ಮತ್ತೆ ಇಬ್ಬರೂ ಇಳಿದು ಬಂದು ಕಾರಿನಲ್ಲಿ ಕುಳಿತರು. ಕಾರು ವೇಗವಾಗಿ ಲಕ್ಷ್ಮೀ ಥಿಯೇಟರಿನ ಕಡೆಗೆ ಸಾಗತೊಡಗಿತು.

ಕಾರು ಥಿಯೇಟರಿನ ಬಳಿಗೆ ಬಂದಾಗ, ಸುಂದರರಾಯನು ಹೇಳಿದಂತೆ ೫-೪೫ ಆಗಿದ್ದಿತು. ಆಗಲೇ ಜನರು ಥಿಯೇಟರಿನೊಳಗೆ ಕಿಕ್ಕಿರಿದಿದ್ದರು. ಸುಂದರರಾಯನಿಗೆ ಮೊದಲ ತರಗತಿಯ ಎರಡು ಟಿಕೇಟುಗಳು ದೊರೆಯಲು ಅಷ್ಟೊಂದು ಕಷ್ಟವಾಗಲಿಲ್ಲ. ಅವರು ಬಂದು ಒಳಗೆ ಕುಳಿತೊಡನೆಯೇ ಕೊನೆಯ ಗಂಟೆ ಬಾರಿಸಿ, ಪ್ರಾರ್ಥನಾ ಪದ್ಯವು ಆರಂಭವಾಯಿತು. ಸುಶೀಲೆ ಸುಂದರರಾಯನ ಪಕ್ಕದಲ್ಲೇ ಕುಳಿತಿದ್ದಳು. ಅವಳೇನೋ ನಾಟಕವನ್ನು ಏಕಾಗ್ರ ದೃಷ್ಟಿಯಿಂದ ನೋಡುತ್ತಿದ್ದರೂ, ಸುಂದರರಾಯನಿಗೆ ಅದರ ಗೊಡವೆಯೇ ಇರಲಿಲ್ಲ. ಅವನು, ಸುಶೀಲೆ ಪಕ್ಕದಲ್ಲಿ ಕುಳಿತುಕೊಂಡುದರಿಂದುಂಟಾಗುವ ಆನಂದವನ್ನು ಅನುಭವಿಸಿ ಹಿರಿಹಿರಿ ಹಿಗ್ಗುತ್ತಿದ್ದನು.

ನಾಟಕವು ಕೊನೆಗೊಂಡಾಗ ಒಂಬತ್ತೂವರೆಗಂಟೆ. ಸುಂದರರಾಯನೂ ಸುಶೀಲೆಯೂ ಕಾರಿದ್ದೆಡೆಗೆ ಬಂದು ಕುಳಿತುಕೊಂಡರು. ದಾರಿಯಲ್ಲಿ ಹೋಗುತ್ತಿರುವಾಗ ಸುಂದರರಾಯನೇ ಕೇಳಿದನು.

" ಹೇಗಿತ್ತು, ನಾಟಕ ? "

" ಅಂದರೆ, ಯಾವುದನ್ನು ಕೇಳುತ್ತೀರಿ ? ಅಭಿನಯ, ದಿಗ್ದರ್ಶನ, ಕಥೆ, ದೃಶ್ಯ, ಸಂಗೀತ — ಇವುಗಳಲ್ಲಿ ಯಾವುದು ? "

" ಎಲ್ಲವೂ. "

"ಕಥೆಯನ್ನು ಬಿಟ್ಟು ಉಳಿದುದೆಲ್ಲವೂ ಮನಸ್ಸಿಗೆ ಒಪ್ಪಿಗೆಯಾಯಿತು."

"ಕಥೆಯಲ್ಲಿ ಮಾತ್ರ ದೋಷವೇನು ?"

"ದೋಷ ! ದೋಷವಿಲ್ಲವೇ, ಮತ್ತೆ ? ಮುದುಕನನ್ನು ಮದುವೆಯಾದ

ಆ ಹುಡುಗಿ, ಬೇರೊಬ್ಬ ತರುಣನ ಹಿಂದೆ ಓಡಿಹೋಗೋದು ಅನುಚಿತ ಮತ್ತು
ದೋಷವಲ್ಲವೇ ?"

"ನೋಡಿ ; ನೀವು ಕಥೆಯನ್ನು ಸರಿಯಾಗಿ ಮಂದಟ್ಟು ಮಾಡಿಕೊಳ್ಳ
ಲಿಲ್ಲ. ಮುದುಕರು ತರುಣಿಯರನ್ನು ಮದುವೆಯಾಗೋದು ತಪ್ಪು, ಅದರಿಂದಾ
ಗೋ ಪರಿಣಾಮ ಹೀಗೇಂತ ತೋರಿಸಲಿಕ್ಕೆ ಬರೆದದ್ದು ಆ ನಾಟಕ. ಅದಕ್ಕೇ,
ಅದಕ್ಕೆ 'ವಿಷಮ ಜೀವನ' ಅಂತ ಹೆಸರು." ಎಂದು ಸುಂದರರಾಯನು ಬಿಡಿಸಿ
ಹೇಳಿದನು.

"ಹೌದು, ಮುದುಕರು ಹುಡುಗಿಯರನ್ನು ಮದುವೆಯಾಗುವದು ತಪ್ಪು
ಎಂಬುದನ್ನು ನಾನು ಸಹಾ ಒಪ್ಪುತ್ತೇನೆ. ಆದರೆ ಹುಡುಗಿಯರು ಪರಪುರುಷನ
ಹಿಂದೆ ಓಡಿ ಹೋಗುವುದು ಕೂಡಾ ತಪ್ಪು ಅಲ್ಲವೇ ? ಹಾಗೆ ಮಾಡುವವಳು
ಹಿಂದೆ ಮುದುಕನನ್ನು ಮದುವೆಯಾದ್ದೇಕೆ ?"

"ಉಪಾಯವಿಲ್ಲದೆ."

"ನೀವು ಏನೇ ಹೇಳಿ; ಕೊನೆಯಲ್ಲಿ ಹೀಗೆ ಮಾಡೋದಕ್ಕಿಂತ ಮದುವೆ
ಯ ಕಾಲದಲ್ಲಿ ನೇಣು ಹಾಕಿಕೊಂಡು ಸತ್ತು ಬಿಡೋದೇ ಲೇಸು."

ಸುಂದರರಾಯನು ಈ ವಾದಕ್ಕೆ ಉತ್ತರಗೊಡಲಾರದೆ, ಬೆರಗಾದನು.
ಅಷ್ಟರಲ್ಲಿ ರಂಗರಾಯರ ಮನೆಯೂ ಬಂತು. ಸುಶೀಲೆ ಇಳಿದು ಹೋದಳು.
ದಾರಿಯಲ್ಲಿ ಮುಂದೆ ಹೋಗುತ್ತಿದ್ದಂತೆ ಸುಂದರರಾಯನು ಎಲ್ಲವನ್ನೂ ಮರೆತು
ಬಿಟ್ಟನು. ಆದರೆ, ಸುಶೀಲೆ ಆ ದಿನವನ್ನು ಮರೆಯಲಿಲ್ಲ. ಆ ನಾಟಕವನ್ನೇ
ಮನಸ್ಸಿನಲ್ಲಿ ಮಥಿಸುತ್ತಾ ಇದ್ದಳು. ಯೋಚನಾ ಭಾರದಿಂದ ಅವಳಿಗೆ ನಿದ್ರೆ
ಕೂಡಾ ಆ ರಾತ್ರಿ ಬರಲಿಲ್ಲ.

ನಾಲ್ಕಾರು ದಿನಗಳು ಕಳೆದವು. ಒಂದು ದಿನ, ಸುಶೀಲೆ ಸುಂದರರಾಯ
ರಿಬ್ಬರೂ ಊರ ಕೆರೆದಂಡೆಯಲ್ಲಿ ಕುಳಿತುಕೊಂಡಿದ್ದರು. ಕಾರನ್ನು ಸ್ವಲ್ಪ
ದೂರದಲ್ಲೇ ಬಿಟ್ಟು ಬಂದಿದ್ದರು. ಬಂದು ಸ್ವಲ್ಪ ಹೊತ್ತಿನ ವರೆಗೂ ಯಾರೂ
ಮಾತನಾಡಲಿಲ್ಲ. ಸುಂದರರಾಯನು ಚಿಕ್ಕ ಕಲ್ಲೊಂದನ್ನು ಎತ್ತಿಕೊಂಡು
ಕೆರೆಯ ನೀರಿಗೆಸೆದನು. ಅಲ್ಲೋಲ ಕಲ್ಲೋಲವಾಗಿ ತೆರೆಗಳು ಹುಟ್ಟಿಕೊಂಡು
ಕೆರೆಯ ತುಂಬಾ ವ್ಯಾಪಿಸಿಕೊಂಡವು. ಸುಂದರರಾಯನು ಮತ್ತೆ [illegible]
ತನ್ನ ದೃಷ್ಟಿಯನ್ನೆತ್ತಿ ಸುತ್ತಲೂ ನೋಡಿದನು. ದೂರದಲ್ಲಿ ನೀರೊನ್ನೆ [illegible]

ವಾಣ ಬೆಟ್ಟವು ವಿಸ್ತಾರವಾಗಿ, ಅನಂತವಾಗಿ ಕಡಲ್ದೆರೆಯಂತೆ, ಅಂಕುಡೊಂ ಕಾಗಿ ವ್ಯಾಪಿಸಿಕೊಂಡಿತ್ತು. ಅದರ ಮೇಲೆ ಮುಳುಗಲು ಸಿದ್ಧನಾಗಿ ಕೆಳಗಿಳಿ ಯುತ್ತಿರುವ ಭಾಸ್ಕರ; ಗುಡ್ಡದಿಂದ ನಡೆದುಕೊಂಡು ಬಂದು ಕೆರೆಯ ತನ ಕವೂ ಹಬ್ಬಿದ್ದ ಹಸುರು ಸಸ್ಯಶ್ರೇಣಿ; ನೀಲಾಕಾಶದಲ್ಲಿ ಬೆಳ್ಳಿಯ ಮೋಡಗಳು; ಎಲ್ಲವನ್ನೂ ನೋಡಿ, ಸುಂದರರಾಯನ ಮನಸ್ಸು ಉಲ್ಲಸಿತವಾಯಿತು; ಹಗುರ ವಾಗಿ ಗಾಳಿಯಲ್ಲಿ ತೇಲತೊಡಗಿತು ಆ ಉಲ್ಲಾಸದುಬ್ಬರದಲ್ಲಿಯೇ ಮೌನ ವಾಗಿ ಕುಳಿತ ಸುಶೀಲೆಯೊಡನೆ ಸಂಭಾಷಿಸಿದನು:

"ನೋಡಿದಿರಾ ! ಎಷ್ಟು ರಮಣೀಯವಾಗಿದೆ ನಿಸರ್ಗ !"

ಸುಶೀಲೆ ಬಿಸುಸುಯ್ದಳು: "ಹೌದು; ಆದರೆ, ಈ ರಮಣೀಯತೆ ಎಷ್ಟು ಕಾಲ ? ನೋಡಿ; ಸೂರ್ಯನು ಅಸ್ತಂಗತನಾಗಲು ಸಿದ್ಧನಾಗಿದ್ದಾನೆ. ಇನ್ನು ಸ್ವಲ್ಪ ಕಾಲದಲ್ಲೇ ಇರುಳ ಮುಸುಕಿನಲ್ಲಿ, ಈ ಸೊಬಗೆಲ್ಲವೂ ಬೆಂಕಿಯಲ್ಲಿ ಸುಟ್ಟಂತೆ, ಮಸಿಯಾಗುವದಿಲ್ಲವೆ ?" ಎಂದು ಕೇಳಿದಳು.

ಅವಳ ಮಾತುಗಳಲ್ಲಿ ಅಡಕವಾಗಿರುವ ಗೂಢಾರ್ಥವನ್ನೂ ತತ್ವವನ್ನೂ ತಿಳಿಯದೆ, ದಿಗ್ಭ್ರಮೆಗೊಂಡು ಸುಂದರರಾಯನು ಹೇಳಿದನು: "ಆದರೆ ಮುಂಜಾವದಲ್ಲಿ ಪುನಃ ಗೋಚರಿಸುವದಿಲ್ಲವೆ ?

ಯಾವಾಗಲೂ, ಪ್ರಕೃತಿಯನ್ನೂ, ಸೌಂದರ್ಯವನ್ನೂ ಕಂಡು ಹಿರಿಹಿಗ್ಗು ಹುಣಿಯುತ್ತಿದ್ದ ಸುಶೀಲೆ, ಇಂದೇಕೆ ಹೀಗೆ ಮಾತಾಡುತ್ತಾಳೆಂಬುದು ಅವನಿಗರ್ಥ ವಾಗಲಿಲ್ಲ.

"ಆದರೆ ಅದು ಪುನರ್ಜನ್ಮ," ಎಂದು ಸುಂದರರಾಯನ ಮಾತಿಗೆ ಪ್ರತಿ ಯಾಗಿ ಸುಶೀಲೆ, ನುಡಿದಳು.

ಸ್ವಲ್ಪ ಹೊತ್ತಿನ ಮೇಲೆ ಸುಶೀಲೆ, "ಡಾಕ್ಟರರೇ ! ನಿಮಗೆ ಹೃದಯ ಪರೀಕ್ಷಾ ಜ್ಞಾನವಿದೆಯೇ ?" ಎಂದು ಕೇಳಿದಳು.

"ಓಹೋ !"

"ಹಾಗಾದರೆ, ನನ್ನ ಹೃದಯದ ಸ್ಥಿತಿಯನ್ನು ವರ್ಣಿಸಿ ನೋಡೋಣ."

ಸುಂದರರಾಯನು ಉತ್ತರಗೊಡಲು ಸ್ವಲ್ಪ ತತ್ತರಿಸಿದನು: "ನಿಮ್ಮ ಹೃದಯದಲ್ಲಿ ಪ್ರಣಯ ಕುಸುಮವು ಅರಳುತ್ತಿದೆ. ಅದು ತುಂಬಿಗಾಗಿ

ಹಾತೊರೆಯುತ್ತಿದೆ."

ಸುಶೀಲೆ ಪೊಳ್ಳು ನಗುವನ್ನು ನಕ್ಕಳು: "ನಿಮಗೆ ಕನಸಿನಲ್ಲಿ ವಿಶ್ವಾಸ ವಿದೆಯೇ ?"

"ವಿಶ್ವಾಸವಿಲ್ಲ; ಆದರೂ ಕೆಲವೊಮ್ಮೆ ಅನಿವಾರ್ಯವಾಗಿ ವಿಶ್ವಾಸವನ್ನು ತೋರಿಸಬೇಕಾಗುತ್ತದೆ."

"ನನಗೆ ನಿನ್ನೆ ಒಂದು ಕನಸಾಯಿತು."

"ಏನದು ?"

"ಅಲ್ಲೋಲ ಕಲ್ಲೋಲವಾದ ಮಹೋದಧಿಯ ತರಂಗಗಳಲ್ಲಿ ಸಿಕ್ಕಿಬಿದ್ದಿ ದ್ದೇನೆ. ಬಿರುಗಾಳಿ ಪ್ರಚಂಡವಾಗಿ ಬೀಸುತ್ತಿದೆ. ಪ್ರವಾಹವು ನನ್ನನ್ನು ಮೃತ್ಯುವಿನೆಡೆಗೊಯ್ಯುತ್ತಿದೆ. ತೀರದಲ್ಲಿ ಕರುಣಾಳುವೊಬ್ಬನು ನನ್ನನ್ನು ರಕ್ಷಿ ಸಲು ಎರಡೂ ಕೈಗಳನ್ನು ನೀಡಿದ್ದಾನೆ."

"ನೀವೇನು ಮಾಡಿದಿರಿ ? ಅವನನ್ನಾಶ್ರಯಿಸಿದಿರೇ ?"

"ಇಲ್ಲ; ನನ್ನ ಮನಸ್ಸು ಡೋಲಾಯಮಾನವಾಗಿತ್ತು. ಪ್ರವಾಹದ ವೇಗ ವಾದರೂ ಭಯಂಕರವಾಗಿತ್ತು. ಸಾಗರವನ್ನು ನಾನು ಬಿಡಲಾರದವಳಾಗಿದ್ದೆ. ಆದರೂ ನೀಡಿದ ಸಹಾಯವನ್ನು ಒಲ್ಲೆನ್ನುವಷ್ಟು ಮನೋನಿಗ್ರಹವು ನನ್ನಲ್ಲಿ ರಲಿಲ್ಲ. ಅಷ್ಟರಲ್ಲೇ ಎತ್ತರವಾದ ತೆರೆಯೊಂದು ಹೊರಳಿ ಬಂದು ನನ್ನ ಸಮಾ ಧಿಯನ್ನು ಮಾಡಿತು."

"ಭಯಂಕರ ದುಃಸ್ವಪ್ನ;"

ಮತ್ತೆ ಇಬ್ಬರೂ ಮೂಕರಾದರು. ಸ್ವಲ್ಪಹೊತ್ತು ಕಳೆಯಿತು; ತಂಗಾಳಿ ಸುಯ್ಯೆಂದು ತೀಡತೊಡಗಿತು. ಭೂತಾಕಾರದ ಕಾರ್ಮುಗಿಲುಗಳು ಆಕಾಶದಲ್ಲಿ ದಟ್ಟವಾಗಿ ಕವಿದುಕೊಂಡವು; ಮರಗಳೆಲ್ಲವೂ ಹುಚ್ಚೆದ್ದು ಕುಣಿಯತೊಡಗಿದವು ಒಂದೆರಡು ಹನಿಗಳೂ ಬಿದ್ದವು.

"ಮಳೆ ಬರುವ ಸೂಚನೆ ಕಾಣುತ್ತಿದೆ; ಹೋಗೋಣವೇನು ?" ಎಂದಳು ಸುಶೀಲೆ. ಮಾತು ಮೃದುವಾಗಿತ್ತು.

ಸುಂದರರಾಯನು ಮೌನವಾಗಿ ಎದ್ದನು. ದಾರಿಯಲ್ಲಿ ಯಾರೂ ಮಾತ ನಾಡಲಿಲ್ಲ. ಸುಶೀಲೆಯನ್ನು ಅವಳ ಮನೆಗೆ ಬಿಟ್ಟು ಸುಂದರರಾಯನು ತನ್ನ ಮನೆಗೆ ಬಂದನು.

ಮನೆಗೆ ಬರುವ ಹೊತ್ತಿಗೆ ಸರಿಯಾಗಿ ಒಳಗಿನಿಂದ ಮಾತುಕಥೆ ಕೇಳು

ತ್ತಿತ್ತು. ದಪ್ಪವಾದ ಧ್ವನಿಯಿಂದ ಬಂದವರು ತನ್ನ ಮಾವನೆಂದು ಸುಂದರ ರಾಯನು ತಿಳಿದುಕೊಂಡನು. ನಾಲ್ಕಾರು ತಿಂಗಳಿಂದ ಸುಂದರರಾಯನನ್ನು ವಿವಾಹಮಾಡಿಕೊಳ್ಳೆಂದು ಅವನ ತಾಯಿ ಆಗ್ರಹಿಸುತ್ತಲೇ ಇದ್ದಳು. ಸುಂದರ ರಾಯನು, "ಇಷ್ಟು ಬೇಗನೆ ಬೇಡ ; ಮುಂದೆ ನೋಡೋಣ ;" ಎಂದು ಮಾ ತುಗಳನ್ನು ಹೇಳಿಸಿ ಬಿಡುತ್ತಿದ್ದನು. ತಾಯಿ, "ಬೇಗನೇ ಅನ್ನುತ್ತೀಯಾ ? ಈಗ ಹಾಗೆ ನಿನಗೇನು ಬಾಲ್ಯಪ್ರಾಯವೇ ?" ಎಂದು ನಿರಾಶಳಾಗಿ ಬಿಡುತ್ತಿ ದ್ದಳು. ಇದೇ ಸಮಯದಲ್ಲಿ ದೂರ ಪ್ರದೇಶದಲ್ಲಿದ್ದ ಸುಂದರರಾಯನ ಸೋದರ ಮಾವನೂ ಗಂಟು ಬಿದ್ದ. ಅವನಿಗೂ ಒಂದು ಪ್ರಬುದ್ಧೆಯಾದ ಹುಡುಗಿ ; ಹೇಗಾದರೂ ಮಾಡಿ, ಆ ವರ್ಷವೇ ಕನ್ಯಾದಾನ ಮಾಡಬೇಕೆಂದು ಅವನ ಹ ಠಲ. ವರರೇನೋ ನಿರಾಯಾಸವಾಗಿ, ಹುಡುಗಿಯ ರೂಪ, ವಿದ್ಯೆ, ಬುದ್ಧಿಗ ಳನ್ನು ಮೆಚ್ಚಿ, ಹುಡುಗಿಯ ಮೈಮೇಲೆ ಹಾಕುವ ಚಿನ್ನಾಭರಣಗಳಿಗೆ ಮನ ಸೋತು, ಸಾವಿರಗಟ್ಟಳೆಯಾಗಿ ಬರಲು ಸಿದ್ಧರಿದ್ದರೂ, ಹುಡುಗಿಯ ತಂದೆಗೆ ತನ್ನ ಅಕ್ಕನ ಮಗನಿಗೇ ಕನ್ಯಾದಾನ ಮಾಡಬೇಕೆಂಬ ಹಿರಿಯಾಸೆ. ಇದಕ್ಕೆ ಪ್ರತಿಕೂಲವಾಗಿ ನಿಂತವನು ಸುಂದರರಾಯನೊಬ್ಬನೇ !

ಸುಂದರರಾಯ ಒಳಬಂದಾಗ, ಅಕ್ಕ- ತಮ್ಮ ಚಾಪೆಯಲ್ಲಿ ಎದುರುಬದು ರಾಗಿ ಕುಳಿತು ಸಲ್ಲಾಪಿಸುತ್ತಿದ್ದರು. ಕಾಫಿ ತಿಂಡಿಯ ಸೇವನೆಯಾಗಿತ್ತು. ಸುಂದರರಾಯನನ್ನು ನೋಡಿ, ಅವನ ತಾಯಿ ಹೇಳಿದ್ದಳು. "ಏನು, ಸುಂದರಾ ಇವೊತ್ತು ನಿನ್ನ ಮಾವ, ನಿನ್ನ ಕೊನೆಯ ತೀರ್ಪನ್ನು ಕೇಳಿಕೊಂಡು ಹೋ ಗಲು ಬಂದಿದ್ದಾನೆ. ಏನು ಹೇಳುವಿ ? ನಾಲ್ಕಾರು ತಿಂಗಳಿಂದಲೂ ವಿಷಯ ವನ್ನು ಹಾರಿಸಿಯೇ ಬಿಡುತ್ತಿದ್ದಿಯಲ್ಲ ?"

ಸುಂದರರಾಯನು ಮಾತಾಡದೆ ತನ್ನ ಕೋಣೆಯಲ್ಲಿ ಬಟ್ಟೆ ಬಿಚ್ಚುತ್ತಿದ್ದನು.

ಅಕ್ಕನ ಮಾತಿಗೆ ಪ್ರತಿಯಾಗಿ ತಮ್ಮನೇ ಹೇಳಿದನು: "ಇಲ್ಲಪ್ಪಾ, ನಮ್ಮ ಸುಂದರ ದೊಡ್ಡ ಸುಧಾರಕ. ಅವನು ಬ್ರಾಹ್ಮಣ ಕನ್ನೆಯನ್ನು ವಿವಾಹವಾಗು ವುದೆಂದರೇನು! ಅವನು ಮದುವೆಯಾಗುವುದಾದರೆ, ವಿಧವೆಯನ್ನೋ, ಹರಿಜನ ಜಾತಿಯವಳನ್ನೋ.... .... !"

ಸುಂದರರಾಯನು ಅದಕ್ಕೂ ಮಾತನಾಡಲಿಲ್ಲ. ಮೆಲ್ಲನೆ ನಕ್ಕನು ಮಾತ್ರ ; ಹೊರಗೆ ಅಕ್ಕ-ತಮ್ಮ, ಇಬ್ಬರೂ ನಕ್ಕರು.

"ಹೊರಗೆ ಬರುತ್ತೀಯೋ ? ನಾವೇ ಅಲ್ಲಿಗೆ ಬರಬೇಕೋ ?" ಎಂದು ತಾಯಿ ಪುನಃ ಕೇಳಿದಳು.

ಸುಂದರರಾಯನು ಹೊರಬಂದನು. ಕಾಫೀ ಸೇವನೆಯೂ ಆಯಿತು. ಆ ದಿನವಿಡೀ ಅವನು ಹೋದಲ್ಲಿ, ಬಂದಲ್ಲಿ, ತಾಯಿ, ಮಾವ, ಇಬ್ಬರೂ ಕೂಡಿ ಕೀಟಲೆ ಕೊಡುತ್ತಿದ್ದರು. 'ಏನೂ ಸಂಕೋಚ ಬೇಡ; ನಿಸ್ಸಂಶಯವಾಗಿ ಹೇಳು' ಎಂದು ಮಾವ ಪದೇ ಪದೇ ಹೇಳುತ್ತಿದ್ದರೂ, ಸುದರರಾಯನಿಂದ ಹಾಗೆ ಮಾಡುವದಾಗಲಿಲ್ಲ. ಕೊನೆಗೊಮ್ಮೆ, "ಇನ್ನೊಂದು ವಾರದಲ್ಲಿ ತಿಳಿಸಿಬಿಡುತ್ತೇನೆ, ಮಾವ" ಎಂದು ಮಾವನನ್ನು ಸುಮ್ಮನಾಗಿಸಿಬಿಟ್ಟನು. ಆ ದಿನ ಉಳಿದುಕೊಂಡು ಬೆಳಗ್ಗೆ ಎದ್ದು ಊರಿಗೆ ಹೋದನು ಭೀಮರಾಯ.

ಮರುದಿನ ಸುಂದರರಾಯನು ಬಟ್ಟೆ ಹಾಕಿಕೊಳ್ಳುತ್ತಿದ್ದಂತೆಯೇ ತಾಯಿಯನ್ನು ಕರೆದನು.

"ಏನು ?" ಎಂದು ತಾಯಿ ಬಂದಳು.

"ನಿನ್ನೊಡನೆ ಒಂದು ಸಂಗತಿ ಹೇಳಬೇಕೆಂದಿದ್ದೇನೆ"

"ಮದುವೆ ಸಂಗತಿಯಾದರೆ ಮಾತ್ರ ; ಇಲ್ಲವಾದರೆ ಹೋಗುತ್ತೇನೆ."

"ಹ್ಞಾ ; ಅದೇ."

"ಹಾಗಾದರೆ, ಏನದು ? ಹೇಳು ; ಕೇಳಿಬಿಡೋಣ." ಎಂದು ಸರಸಮ್ಮ ಖುರ್ಚಿಯ ಮೇಲೆ ಕುಳಿತುಕೊಂಡಳು.

"ನಾನು ರಂಗರಾಯರ ಮಗಳು ಸುಶೀಲೆಯನ್ನಾಗಬೇಕೆಂದಿದ್ದೇನೆ."

"ಹೋ ! ಅವಳೇ ? ತುಂಬಾ ಚೆಲುವಾದ ಹುಡುಗಿ."

"ಅವಳ ಚೆಲುವಿಕೆಗಿಂತಲೂ, ಗುಣವನ್ನು ನಾನು ಹೆಚ್ಚಾಗಿ ಮೆಚ್ಚಿದ್ದೇನೆ."

"ಸರಿ ; ರೂಪದೊಂದಿಗೆ ಗುಣವೂ ಸೇರಿಬಿಟ್ಟರೆ, ಚಿನ್ನಿಗೆ ಬಂಗಾರದ ಒಪ್ಪ ಕೊಟ್ಟ ಹಾಗೆ."

"ಹಾಗನ್ನು !"

"ಹಾಗಾದರೆ ತಡವೇಕಪ್ಪ ? ಬೇಗನೇ ಈ ವಿಚಾರವನ್ನು ರಾಯರ ಹತ್ತಿರ ಪ್ರಸ್ತಾಪಿಸುವದು ಲೇಸಲ್ಲವೇ ? ಮಿಂಚಿಹೋದ ಕಾರ್ಯ ಚಿಂತೆಗೆ ಕಾರಣ !"

"ಅದು ಸರಿಯಮ್ಮ ; ಆದರೆ ನಾನಾಗಿಯೇ ಈ ವಿವಾಹ ವಿಚಾರವನ್ನು ಪ್ರಸ್ತಾಪಿಸುವುದಕ್ಕೆ ಸ್ವಲ್ಪ ಸಂಕೋಚವಾಗುತ್ತದೆ !"

"ಹೀಗೆ ಸಂಕೋಚಪಟ್ಟರೆ ಹೇಗೆ ? ಹೇಳು ; ನಮ್ಮ ಕಡೆಯಲ್ಲಿ ಯಾರಿದ್ದಾರೆ ವಿಷಯವನ್ನು ಪ್ರಸ್ತಾಪಿಸಲಿಕ್ಕೆ ? ನೀನು ಸಾವಕಾಶ ಮಾಡುವಷ್ಟರಲ್ಲೇ ರಾಯರು ಬೇರೆಕಡೆ ವರನನ್ನು ಗೊತ್ತುಮಾಡಿಬಿಟ್ಟರೆ ... ....... ?"

ಸುಂದರರಾಯನಿಗೂ ಆ ಅಂಜಿಕೆ ಇದ್ದೇ ಇತ್ತು ; ಆದರೆ ಅವನು ಸ್ವಲ್ಪ ನಾಚಿಕೆಯ ಪ್ರಾಣಿ. ಎಷ್ಟೋ ಬಾರಿ ಈ ವಿಚಾರವನ್ನೆತ್ತಿಕೊಂಡು ಸುಶೀಲೆಯೊಡನೆ ಮಾತನಾಡಹೋಗಿ ಸುಮ್ಮನಾಗಿದ್ದನು. ತಾಯಿಯ ಮಾತನ್ನು ಕೇಳಿ "ಆಗಲಮ್ಮ ; ಹಾಗೆಯೇ ಮಾಡೋಣ" ಎಂದು ಎದ್ದುಕೊಂಡು ಹೊರಟು ಹೋದನು.

ನಾಲ್ಕಾರು ದಿನಗಳು ಕಳೆದವು. ಆ ದಿನಗಳಲ್ಲೆಲ್ಲಾ ಸುಂದರರಾಯನು ಹೋದಾಗ, ತನಗೆ ಅಸೌಖ್ಯವೆಂಬ ನೆವವನ್ನು ಮುಂದೊಡ್ಡಿ ಸುಶೀಲೆ ಅವನನ್ನು ಹಿಂದಕ್ಕಟ್ಟಿದಳು. ಆ ಅವಧಿಯೊಳಗೇ ತಾಯಿ ನೂರಾರು ಬಾರಿ ಮಗನನ್ನು ಪ್ರಶ್ನಿಸಿದಳು, ಆ ವಿಚಾರವಾಗಿ. ಸುಂದರರಾಯನಿಗೆ ಆ ವಿಷಯವನ್ನು ಪ್ರಸ್ತಾಪಿಸಲು ಸ್ವಲ್ಪವೂ ಎಡೆ ದೊರಕಿರಲಿಲ್ಲ. ತಾಯಿಯ ಪ್ರಶ್ನೆಗಳಿಗೆ ಬಿಗ್ಗುಪ್ಪೆಗೊಂಡು, "ಎಷ್ಟಮ್ಮ ಅವಸರ ನಿನಗೆ ? ಹಾಗೇನು ಸುಶೀಲೆಗೆ ಇವತ್ತು ನಾಳೆಯೇ ಮದುವೆಯಾಗಿಬಿಡೋದಿಲ್ಲ " ಎಂದು ಅವಳ ಬಾಯಿಯನ್ನು ಮುಚ್ಚಿಸಿದ್ದನು.

ಅಂದು ಏಳನೆಯ ದಿನ ; ಸುಂದರರಾಯನು ಹೋದಾಗ ಅವನಿಗೆ ರಂಗರಾಯರ ಪ್ರೇತದರ್ಶನವಾಯಿತು ಹೃದಯ ಸ್ತಂಭನದಿಂದ ಅಕಸ್ಮಾತಾಗಿ ಹೋಗಿಬಿಟ್ಟಿದ್ದನು. ಹತ್ತಾರು ಜನರು ಕೂಡಿ ಶಿಬಿಕೆಯನ್ನು ಸಿದ್ಧಪಡಿಸು

ತಿದ್ದರು. ಅದನ್ನು ನೋಡಿ ಸುಂದರರಾಯನ ಮನಸ್ಸಿನಲ್ಲಿ ಏಕೋ ಕಳವಳ ವುಂಟಾಯಿತು. ಹಾಗೆ ಮೆಲ್ಲನೆ ಒಳಗೆ ಕಾಲಿಟ್ಟನು. ಅಲ್ಲಿ, ಬೋಳುತಲೆಯ, ಬೋಳುಹಣೆಯ, ಕೆಂಪುವಸನವನ್ನುಟ್ಟುಕೊಂಡ, ವಿಕಾರರೂಪದ ಸ್ತ್ರೀಮೂರ್ತಿಯನ್ನು ಕಂಡು ಬೆಚ್ಚಿಬಿದ್ದನು. ಎಷ್ಟುಬಾರಿ ನೋಡಿದರೂ, ಅವನಿಗೆ ಅದು ಸುಶೀಲೆಯೆಂದು ನಂಬಿಕೆಯುಂಟಾಗಲಿಲ್ಲ. ಅಷ್ಟು ಭೀಭತ್ಸಕರವಾಗಿತ್ತು ಆ ವೇಷ !

"ಏನಮ್ಮಾ ! ಇದು ?" ಎಂದು ಕೇಳಿದನು. ಅವನ ಧ್ವನಿ ಕಂಪಿಸುತ್ತಿತ್ತು.

ಕಣ್ಣೀರ ಪ್ರವಾಹದಲ್ಲಿ ತೇಲುತ್ತಿದ್ದ ಸುಶೀಲೆ, "ಏನೆನ್ನಲಿ? ನನ್ನ ಸರ್ವಸ್ವಾಪಹರಣ !" ಎಂದು ಬಿಕ್ಕುತ್ತಾ ಹೇಳಿದಳು.

"ಹಾಗಾದರೆ, ರಂಗರಾಯರು ನಿಮ್ಮ .... .... "

ಸುಶೀಲೆ, ಮುಂದೆ ಅವನನ್ನು ಮಾತನಾಡಗೊಡದೆ, ಹೌದೆಂದು ತಲೆಯಲ್ಲಾಡಿಸಿದಳು.

"ಹಾಗಿದ್ದರೆ, ನೀವು ಅವರ ಸಾಕುಮಗಳೆಂದು .... .... "

"ಅಯ್ಯೋ ! ಎಲ್ಲವೂ ಸುಳ್ಳು ; ನಿಮ್ಮ ಕಣ್ಣಿಗೆ ಮಂಕುಬೂದಿ ಎರಚಲು ಮಾಡಿದ ಉಪಾಯ !"

ಸುಂದರರಾಯನಿಗೆ ಕೂಡಲೇ ಎಲ್ಲವೂ ಗೊತ್ತಾಗಿ ಹೋಯಿತು. ಈ ಸುದೀರ್ಘಕಾಲದಲ್ಲಿ ಯಾವುದನ್ನು ತಿಳಿದುಕೊಳ್ಳದೆ ಇಷ್ಟು ಪೇಚಾಡುತ್ತಿದ್ದನೋ, ಅದು ಒಂದು ನಿಮಿಷದಲ್ಲಿ ಗೊತ್ತಾಗಿಹೋಯಿತು. ಮಿಂಚಿನ ವೇಗದಿಂದ ಬಂದು ಕಿರೆದಂಡೆಯಲ್ಲಿ ಕುಳಿತುಕೊಂಡನು. ಆವನ ಸವಿನೆನಸು ನುಚ್ಚುನೂರಾಗಿತ್ತು. ಹೃದಯವು ಬಿರುಗಾಳಿಗೆ ಸಿಲುಕಿದ ನೌಕೆಯಂತೆ ತುಂತುರು ತುಂತುರಾಗಿ ನುಚ್ಚುನೂರಾಗಿತ್ತು.

ಮೆಲ್ಲನೆ ನಂದ ಘಟನೆಗಳನ್ನು ತನ್ನ ಮನೋರಂಗದ ಮೇಲೆ ಚಿತ್ರಿಸಿಕೊಂಡನು. ಸೌಂದರ್ಯದ ವಿಚಾರವಾಗಿ ಸುಶೀಲೆ ತನಗೆ ಬೋಧಿಸಿದ ನೀತಿ, ನಾಟಕ ಪ್ರಕರಣದಲ್ಲಿ ಹೇಳಿದ ಆದರ್ಶವಾಕ್ಯ, ಕನಸಿನ ರೂಪದಿಂದ ತನ್ನ[illegible]ವನ್ನು ಚಿತ್ರಿಸಿದ ಬಗೆ, — ಎಲ್ಲವನ್ನೂ ಸ್ಮರಿಸಿಕೊಂಡನು. ಆಗಲೇ, ತನ್ನ ಮೌಢ್ಯತೆಗಾಗಿ ಧಿಕ್ಕಾರವೂ, ಆದರ್ಶ ರಮಣಿ ಸುಶೀಲೆಯ ಕಡೆಗೆ ಪೂಜ್ಯಭಾವವೂ ಉದಿಸಿತು. ಅದರೊಂದಿಗೇ ಉಪಾಯವಾಗಿ ತನ್ನನ್ನು ಮೋಸಗೊಳಿಸಿದ ಮುದುಕನ ಮೇಲೆ ಚಂಡಾಲ ಕೋಪವುಂಟಾಯಿತು. ಆದರೆ, ಈಗ – ? ಪ್ರತೀಕಾರವಾದರೂ ಯಾರ ಮೇಲೆ ? ಬೂದಿಯ ಮೇಲೆಯೇ ಸರಿ.

ನಡೆದುದನ್ನು ಸ್ಮರಿಸಿಕೊಂಡಾಗ, ಅವನಿಂದ ಅಲ್ಲಿ ಕುಳಿತುಕೊಳ್ಳುವುದಾಗಲಿಲ್ಲ. ಮನೆಗೆ ಬಂದು ತನ್ನ ಮಂಚದ ಮೇಲೊರಗಿಕೊಂಡನು. ಮನಸ್ಸು ಅಶಾಂತಿಯಿಂದ, ದುಃಖದಿಂದ, ಕ್ರೋಧದಿಂದ ತಳಮಳಿಸುತ್ತಿತ್ತು.

ಆಗ ಸಾಧಾರಣ ಆರು ಗಂಟೆ ಸಮಯ ; ಜಡಿಮಳೆ ಮಹಾರೌರವದಿಂದ ಸುರಿಯುತ್ತಿತ್ತು. ಅವನ ಕಣ್ಣಿನಿಂದಲೂ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು.



# ದೇಗುಲಪ್ರವೇಶ.

## ೧

ನಮ್ಮೂರ ದೇವಸ್ಥಾನಗಳಲ್ಲೆಲ್ಲಾ ಅತ್ಯಂತ ದೊಡ್ಡದು ಹಯವದನ ದೇವಸ್ಥಾನ; ಅಲ್ಲದೆ ಬಹಳ ಪ್ರಾಚೀನ ಪ್ರಶಸ್ತಿಯ ದೇವಸ್ಥಾನ. ನಮ್ಮೂರಲ್ಲಿರುವುದೇನು, ಇದೊಂದೇ ದೇವಸ್ಥಾನವಲ್ಲ; ಮೈಲಿಗೊಂದರಂತೆ ಕೆಲವು ಹಾಳು ಗುಡಿಗಳೂ ಇವೆ. ಆದರೆ ಆ ಗುಡಿಗಳು ದೈವ ವಾಸಕ್ಕೂ ಕೂಡಾ ಅಯೋಗ್ಯವೆಂದೆನ್ನಬಹುದು, 'ಜೇಡರ ಬಲೆ' ಗೂಬೆಗಳ ಹೂತ್ಕಾರ. ಮುರಿದ ವಿಗ್ರಹ, ಮಳೆಯಲ್ಲಿ ನೆನೆದು 'ಲಾಗ' ಹಾಕಿದ ಗೋಡೆಗಳು, ಬೆಳೆದ ಹಾವಸೆ— ಇವುಗಳೆಲ್ಲಾ ಆ ಗುಡಿಗಳ ಕೆಲವು ಲಕ್ಷಣಗಳು. [illegible]ರಿಯೊ[illegible]ನೋ ಪ್ರತಿದಿನ ನಸುಕಿನಲ್ಲಿ ಘಂಟೆಯನ್ನು 'ಗಿಣಿ, ಗಿಣಿ' ಮಾಡಿ ಮುರಿದ [illegible]ಕ್ಕೆ ಆರತಿಯ 'ಶಾಕ' ಕೊಡುತ್ತಾನೆ, ತನ್ನ ಕೂಳಿಗೆ ತಕ್ಕ ಕೂಲಿ ಮಾಡುತ್ತಾನೆ. ದೇಗುಲದ ಸ್ಥಿತಿಯನ್ನು ಅಷ್ಟೊಂದು ಗಮನಿಸುವದಿಲ್ಲ. ಅದೆಲ್ಲಾ ಅವನಿಗೇನಗತ್ಯ? ಆದರೆ ಹಯವದನ ಸ್ವಾಮಿಯ ಗುಡಿ ಹಾಗಲ್ಲ. ತಲೆಯೆತ್ತಿ ನಾಲ್ಕಾರು ಶತಮಾನಗಳಾದರೂ ಈಗಲೂ ಅದರ ಭಿತ್ತಿಗಳು, ಈಗ ತಾನೇ ನಿರ್ಮಿಸಲ್ಪಟ್ಟಂತೆ ಹೊಳೆಯುತ್ತವೆ. ಚಿನ್ನದ 'ಮುಗುಟ'ವು ತೆಂಗು ತಾಳೆಯ ಮರಗಳನ್ನೂ ಮೀರಿ ನೂರು ಮೈಲು ದೂರಕ್ಕೂ ಕಾಣುತ್ತದೆ. ಈ ದೇವಸ್ಥಾನವು ತಲೆಯೆತ್ತಿದಂದಿನಿಂದ ಇದರ ಸರ್ವಾಧಿಕಾರವು ಬ್ರಾಹ್ಮಣರದೇ! ಪೂಜೆ ಪುನಸ್ಕಾರಗಳಿಂದ ತೊಡಗಿ ಆಡಳಿತೆಯ ವರೆಗೂ ಎಲ್ಲವೂ ಬ್ರಾಹ್ಮಣರಿಗೆ! ರಾಮಯ್ಯನವರು ಈಗ ದೇವಸ್ಥಾನದ ಮೊಕ್ತೇಸರರು. ನಾಲ್ಕು ವರ್ಷಗಳ ಹಿಂದೆ ಅವರಿಗೆ ಈ ಪಟ್ಟ ದೊರಕಿತ್ತು.

ನಮ್ಮ ದೇವಸ್ಥಾನಕ್ಕೆ ಬಹಳ ಪ್ರಾಶಸ್ತ್ಯವಿದೆ ಎಂದು ಹಿಂದೆಯೇ ಹೇಳಿದ್ದೇನೆ. ಆದರೆ ಜಾತೀಯ ಭೂತವು ಇಲ್ಲಿ ಬಹಳ. ದೇವಸ್ಥಾನದ ಅಂಗಳ

ದೊಳಗೆ ಬ್ರಾಹ್ಮಣರಿಗೆ ವಿನಾ ಉಳಿದವರಿಗೆ ಕಾಲಿಡಲು ಅಧಿಕಾರವಿಲ್ಲ. ದೇವರಿಗೆ ಹಣ್ಣು-ಕಾಯಿ ತಂದರೆ, ಬ್ರಾಹ್ಮಣರಿಗೆ ಎರಡೂ ಹೋಳುಗಳನ್ನು ಕೊಡುತ್ತಾರಾದರೂ ಉಳಿದವರಿಗೆ ಒಂದೊಂದೇ ಹೋಳು. ಒಮ್ಮೆ ಪಂಚಜಾತಿಯವ (ಬ್ರಾಹ್ಮಣನಲ್ಲದವ)ನೊಬ್ಬನು ಇದರ ವಿರುದ್ಧವಾಗಿ ಬಂಡಾಯವನ್ನೆಬ್ಬಿಸಿ, ಎರಡೂ ಹೋಳುಗಳನ್ನೀಯಬೇಕೆಂದು ಘರ್ಜಿಸಿದನಂತೆ. ಆಗ ಅರ್ಚಕನು, "ಏನಪ್ಪಾ! ನನಗೇನು ನಿನ್ನ ಕಾಯಿ ಮಗಳ ಮದುವೆಗೆ ಬೇಕಾಗಿಲ್ಲ. ದೇವರ ಆಜ್ಞೆ ಹೀಗಿದೆಯೆಂದು ಹೀಗೆ ಮಾಡುತ್ತಿದ್ದೇನೆ. ಎರಡು ವರ್ಷಗಳ ಹಿಂದೆ ಹೀಗೆನೇ ಒಬ್ಬ ಕೆಂಗಣ್ಣು ಮಾಡಿ ನನ್ನನ್ನು ಕತ್ತಿಯಿಂದಿರಿಯ ಬಂದ. ನಾನು ಹೆದರಿ, ಎರಡೂ ಹೋಳುಗಳನ್ನು ಕೊಟ್ಟುಬಿಟ್ಟೆ. ಆದರೆ, ನೋಡು, ಕಾಯಿ ಅವನ ಕೈಗೆ ಬಿತ್ತೋ ಇಲ್ಲವೋ, ಮನುಷ್ಯ ದಡಾಮ್ಮನೆ ಕೆಳಗೆ ಬಿದ್ದ. ಬಿದ್ದವನೇ ಕಲ್ಲಾಗಿ ಹೋಗಿಬಿಟ್ಟ. ದೇವರ ಆಜ್ಞಾವಿರುದ್ಧ ನಡೆಯುವದೆಂದರೆ ಸಾಮಾನ್ಯವೇ?" ಎಂದನಂತೆ. ಇವನ ಸ್ಟೇಟ್‌ಮೆಂಟಿಗೆ ಸರಿಯಾಗಿ ಅಂಗಳದಲ್ಲಿ ಕಲ್ಲಿನ ಒಂದು ಗೊಂಬೆಯಿದೆ. ಆದರೆ, ಅರ್ಚಕನ ಕಥೆಯೆಲ್ಲಾ ಕಟ್ಟುಕಥೆ. ಯಾವನೋ ಶಿಲ್ಪಿಗನು ಕೆತ್ತಿದ ಗೊಂಬೆಯನ್ನು ತಂದು ಅಲ್ಲಿಟ್ಟಿದ್ದಾರೆ. ಆದರೆ, ಮೂಢ ಜನರೆಲ್ಲರೂ ಅರ್ಚಕನ ಮಾತನ್ನು ದೃಢವಾಗಿ ನಂಬುತ್ತಿದ್ದರು!

ನಾಲ್ಕು ವರ್ಷಗಳ ಹಿಂದಿನ ಮಾತು; ನಮ್ಮೂರ ಬಿಲ್ಲವರು ಬಹಳ ಸೊಕ್ಕಿನ ಮನುಷ್ಯರು. ತೆಂಗು, ತಾಳೆ ಮರಗಳಿಂದ ಕಳ್ಳನ್ನಿಳಿಸಿ ಇವರು ಬಹಳ ಧನಿಕರಾಗಿದ್ದಾರೆ. ಇವರಿಗೆ ಬ್ರಾಹ್ಮಣರೆಲ್ಲಾ 'ಹೆಂಡದ ಮದ' ಎಂದು ಹೇಳುತ್ತಾರೆ. ತಮ್ಮನ್ನು ದೇವಸ್ಥಾನದೊಳಗೆ ಬಿಡುವದಿಲ್ಲ ಎಂದು ಕೇಳಿ ಕೆಲವು ಉದ್ದಂಡ ಬಿಲ್ಲವ ಮನುಷ್ಯರು 'ಬಟ್ಟೆಯಿಲ್ಲದೆ ಲಂಗೋಟಿಯುಟ್ಟು, ಬರೀ ಕಟ್ಟಿಗೆಯಂತಿರುವ ಈ ಗೊಡ್ಡು ಬ್ರಾಹ್ಮಣರು ದೇವರನ್ನು ಮುಟ್ಟಬಹುದು. ಅರಸರಂತೆ ಭರ್ಜರಿಯಾಗಿ ಉಡುಪು ಧರಿಸುವ, ಕೈಗೆ ಚಿನ್ನದ ಕಂಕಣವುಳ್ಳ ತಾವು ಮಾತ್ರ ಮುಟ್ಟಕೂಡದೋ?' ಎಂದು ಮೀಸೆ ತಿರುವಿದರು. ಕೊನೆಗೊಂದು ಉತ್ಸವದ ದಿನ ದೇಗುಲ ಪ್ರವೇಶ ಮಾಡಿಯೂಬಿಟ್ಟರು. ಬ್ರಾಹ್ಮಣರಿಗೆ, ಪ್ರತಿಭಟಿಸಹೋಗಿ ಪರಾಭವವಾಯ್ತು. ಈ ಕೆಲಸ ಮಾಡಿದ್ದೇನೋ ಕೆಲವು ಉದ್ಧಟರು. ಆದರೆ ಬಿಲ್ಲವರ ಸಂಘದ ಮುಂದೆ ಈ ವಿಚಾರ

ಬಂದಾಗ ಕಾರ್ಯದರ್ಶಿಯವರು ಈ ಕಾರ್ಯ ತಪ್ಪೆಂದು ಒಪ್ಪಿಕೊಂಡು, ಅಪ ರಾಧಿಗಳಿಂದ ಕ್ಷಮೆ ಹೇಳಿಸಿದರು. ಆದರೆ, ಬ್ರಾಹ್ಮಣರು ದೇವಸ್ಥಾನ ಶುದ್ಧಿ ಗೆಂದು ಸಹಸ್ರ ರೂಪಾಯಿ ಪರಿಹಾರ ದ್ರವ್ಯ ಕೇಳಿದಾಗ, ಎಲ್ಲರೂ ರೊಚ್ಚಿಗೆದ್ದು ಅದನ್ನು ಪ್ರತಿಭಟಿಸಿದರು. ಕೊನೆಗೆ ಬ್ರಾಹ್ಮಣರು, ಹೇಗೂ ಕೋರ್ಟಿಗೆ ಹೋಗಿ, ವಕೀಲರ ಕೈಬಿಸಿ ಮಾಡಿ, ಬಿಲ್ಲವರ ಹೊಟ್ಟೆ ತಣ್ಣಗೆ ಮಾಡಿದರು. ಬಿಲ್ಲವರು ಬಾಲ ತುಂಡಾದ ನರಿಯ ಹಾಗೆ ಸುಮ್ಮನಾದರು.

ಬಿಲ್ಲವರ ಗಲಾಟೆ ಮುಗಿಯುವುದರೊಳಗಾಗಿ ಹೊಲೆಯರ ಗಲಾಟೆ ಪ್ರಾರಂಭವಾಯಿತು. ಹೊಲೆಯರ ಚರಿತ್ರೆಯನ್ನು ಸ್ವಲ್ಪ ಕೇಳಿ. ವೇದಕಾಲ ದಲ್ಲಿ ಈ ಹೊಲೆಯರೆಂಬವರು ಇರಲಿಲ್ಲ. ಆಗ ಇದ್ದುದು ಬ್ರಾಹ್ಮಣ, ಕ್ಷತ್ರಿಯ ವೈಶ್ಯ, ಶೂದ್ರ ಎಂಬ ನಾಲ್ಕೇ ಜಾತಿ. ಕೊನೆಗೆ ಈ ಹೊಲೆಯರು ಹುಟ್ಟಿ ಕೊಂಡಾಗ, ಬ್ರಾಹ್ಮಣರು ಯೋಚಿಸಿ, ಕೊನೆಗೆ 'ಪಂಚಮರು' ಎಂತ ನಾಮ ಕರಣ ಮಾಡಿಬಿಟ್ಟರು. ಐದನೆಯ ಜಾತಿಯವರು ಅಂತ! ಮದ್ರಾಸಿನ ತಮಿಳ ರೇನೋ ಈ ಹೆಸರನ್ನು 'ಪರಯ'ರಿಗೆ ಡಾಕ್ಟರ್ ಎನೀ ಬೆಸೆಂಟ ಅಮ್ಮನು ಇಟ್ಟದ್ದು ಎನ್ನುತ್ತಾರೆ. ಆದರೆ, ನಮ್ಮೂರ ಬ್ರಾಹ್ಮಣರು, 'ಎನೀ ಬೆಸೆಂಟ್ ಮೊನ್ನೆ ಮೊನ್ನೆಯವಳು. ನಮ್ಮ ಸತ್ತು ಹೋದ ಭೀಮರಾಯ, ರಾಮ ರಾಯರ ಕಾಲದಲ್ಲೇ ಈ ಹೆಸರಿತ್ತು. ಅವರಷ್ಟು ಪ್ರಾಯ ಇವಳಿಗಾಗಿದೆಯೋ?' ಎನ್ನುತ್ತಾರೆ. ನಮ್ಮ ಹಿರಿಯರ ಕಾಲಕ್ಕೆ ಈ ಹೊಲೆಯರೆಲ್ಲಾ ಬ್ರಾಹ್ಮಣರ ಹೆಸರು ಕೇಳಿದರೆ ನಡುಗುತ್ತಿದ್ದರು! ಅವರನ್ನು ಭಜಿಸುತ್ತಿದ್ದರು!! ಅವರಿಗೆ ಮಣಿಯುತ್ತಿದ್ದರು!!! ಆಗ ಅವರ ವಾಸ ದೊಪ್ಪದಲ್ಲಿ. ಆದರೆ ಈಗ ಸರಕಾರ ದವರು ಅವರನ್ನು ಮೇಲೇರಿಸಿದ್ದರಿಂದ ಅವರು ಬಹಳ ಸೊಕ್ಕಿಹೋಗಿದ್ದಾರೆ. ವಿದ್ಯೆಯಿಂದ ಅವರ ಬುದ್ಧಿಗೆ ಕೋಡು ಬಂದಿದೆ. ಈಗ ಅವರ ವಾಸಸ್ಥಾನ ಅರಮನೆಯಲ್ಲಿ. ಓಣಿಯಲ್ಲಿ ಹೋಗುವಾಗ ಅವರ ಹೆಂಗಸರ ಸೀರೆಯ ಸೆರಗೇ ಬಂದು ದೂರಕ್ಕೆ ಬೀಸುತ್ತದೆ. ಪಾಪದ ಬ್ರಾಹ್ಮಣ, ಓಣಿಯ ಗೋಡೆಗೆ ಅತು ನಿಂತರೂ (ಹಿಂದಿನ ಕಾಲದಲ್ಲಿ ಹೊಲೆಯರೇ ಹಾಗೆ ಮಾಡುತ್ತಿದ್ದರು. ಆದರೆ, ಈಗ ವ್ಯತ್ಯಾಸವಾಗಿದೆ.) ಬ್ರಾಹ್ಮಣರು ಹೊಲೆಯರಾಗಿದ್ದಾರೆ. ಹೊಲೆ ಯರು ಬ್ರಾಹ್ಮಣರಾಗಿದ್ದಾರೆ. ಚಿತ್ತಶುದ್ಧಿಯಲ್ಲಿ ಕೂಡಾ ಎಂದು ತಿಳಿದು

ಹೋಪ್) ಆ ಸೀರೆಯ ಸೆರಗು ಅವನನ್ನು ಮುದ್ದಿಸಿಯೇ ಹೋಗುತ್ತದೆ. ಹೊಲೆ
ಯರ ಸೊಕ್ಕನ್ನು ಕುರಿತು ರಾಮಯ್ಯನವರ ಮುದುಕಿ ತಾಯಿ-ಹಳೆಗಾಲದ
ಹೆಂಗಸು-ಕಮಲಮ್ಮ ಒಂದು ಕಥೆ ಹೇಳುತ್ತಾರೆ: ಒಮ್ಮೆ ಅವರು ತಮ್ಮೂರಿನಿಂದ
ಮಂಗಳೂರಿಗೆ ಹೋಗಬೇಕಾಯ್ತು. ಅವರ ಊರಿನಿಂದ ಮಂಗಳೂರಿಗೆ
ಹೋಗಬೇಕಾದರೆ ನಡುವೆ ಕುಮಾರಧಾರಾ ನದಿಯಿದೆ. ಅದನ್ನು ದಾಟಿ
ಹೋಗಬೇಕು. ಇವರು ಹೋಗುವ ಹೊತ್ತಿಗೆ ಸರಿಯಾಗಿ, ದೋಣಿಯಲ್ಲಿ
ಹೊಲೆಯ ಹೆಂಗಸರು 'ಹುಲ್ಲುಹೊರೆ' ಯನ್ನು ಹೇರಿ ಕುಳಿತುಕೊಂಡಿದ್ದರು.
ನದಿಯಲ್ಲಿ ಬೇರೆ ದೋಣಿಯೂ ಇರಲಿಲ್ಲ. ಕಮಲಮ್ಮ ಸುಮ್ಮನೆ ನಿಂತುದನ್ನು
ನೋಡಿ, ಅಂಬಿಗ 'ದೋಣಿ ಹತ್ತಿ, ಅಮ್ಮಾ !' ಎಂದ. ಕಮಲಮ್ಮ ಬಹಳ
ಮಡಿ, ಮಡಿ. ಹೊಲೆಯರ ಗಾಳಿ ಸೋಕಿದರೂ ಸಾಕು, ನೀರಲ್ಲಿ ಸಾವಿರ ಬಾರಿ
ಮುಳುಗು ಹಾಕುವರು ಇಂಥವರು ಹೊಲೆಯರಿದ್ದ ದೋಣಿಯನ್ನು ಹತ್ತಿಯಾ
ರೇ ? 'ಹೊಲೆಯರಿದ್ದಾರಪ್ಪ ನನಗಾಗೋದಿಲ್ಲ, ಮೈಲಿಗೆಯಾಗುತ್ತೆ'
ಎಂದರು. ದೋಣಿ ಹೊರಟಿತು. ಅದರೊಂದಿಗೇ ದೋಣಿಯವರೆಲ್ಲರೂ ಕಿಳ
ಕಿಳನೆ ನಗುವದು ಕಮಲಮ್ಮನಿಗೆ ಕೇಳಿಸಿತು. ಒಬ್ಬಳು ಹೊಲತಿಯಂತೂ
'ಓಹೋ ! ಬಹಳ ಮೈಲಿಗೆಯಾಗಿ ಬಿಡುತ್ತೆ ಇವಳಿಗೆ ! ಮುಡಿ ಮುಂಡೆ !'
ಎಂದು ಹೇಳಿದಳು. ಅದನ್ನು ಕೇಳಿದ ಕಮಲಮ್ಮನಿಗೆ ಸತ್ತ ಹಾಗಾಯಿತು.

ಹೊಲೆಯರು ದೇಗುಲ ಪ್ರವೇಶ ಮಾಡಬೇಕೆಂದು ಪ್ರಯತ್ನಿಸುತ್ತಾ
ಇದ್ದರು. ಆದರೆ, ರಾಮಯ್ಯನವರು ಇದಕ್ಕೆಲ್ಲಾ ಅಸ್ಪದ ಕೊಡಲಿಲ್ಲ. ಇದೇ
ಸಮಯದಲ್ಲಿ ರಾಮಯ್ಯನವರ ಒಕ್ಕಲು ಥೋಮ,(ಹೊಲೆಯ) ತನಗೆ ದೇಗುಲ
ಪ್ರವೇಶಕ್ಕೆ ಅನುಮತಿಗೊಡಬೇಕೆಂದು ಪದೇ ಪದೇ ಹೇಳಿಕೊಳ್ಳುತ್ತಿದ್ದ.
ರಾಮಯ್ಯನವರಿಗೆ ಅವನಿಗೆ 'ನ' ಕಾರದಲ್ಲಿ ಉತ್ತರಗೊಡುವ ಮನಸ್ಸಿಲ್ಲ.
ಥೋಮ, ಅವರ ಒಕ್ಕಲು ; ಅಲ್ಲದೆ, ಅನೇಕ ಆಪತ್ಕಾಲಗಳಲ್ಲಿ ನೆರವಾಗಿದ್ದಾನೆ.
ಒಮ್ಮೆ ರಾಮಯ್ಯನವರ ಹಿರೇ ಹುಡುಗ ಹೊಳೆಯಲ್ಲಿ ತೇಲಿ ಹೋಗುತ್ತಿದ್ದಾಗ
ಹುಡುಗನನ್ನು ಬದುಕಿಸಿದನು ತೋಮ. ಆದರೆ ತೋಮನಿಗೆ ದೇವಸ್ಥಾನವನ್ನು
ಪ್ರವೇಶಿಸಲು ಬಿಟ್ಟರೆ, ತಮ್ಮ 'ಬ್ರಾಹ್ಮಣಿಕೆ' ಹೋದೀತೆಂಬ ಅಂಜಿಕೆ. ರಾಮ
ಯ್ಯನವರಿಗೆ. ಅವರು, ಪ್ರತಿ ದಿನವೂ, 'ನಾಳೆ ಬಾ', 'ನಾಳೆ ಬಾ' ಎಂದು

ಅವನನ್ನು ಹಿಂದಕ್ಕಟ್ಟುತ್ತಿದ್ದರು. ಅನೇಕ 'ನಾಳೆ'ಗಳಾದವು. ತೋಮ ಬೇಸರವಿಲ್ಲದೆ ದಿನಂಪ್ರತಿಯೂ ಬಂದು, ಬಂದು, ಹಿಂದೆ ಹೋಗುತ್ತಿದ್ದ. ಕೊನೆಗೊಂದು ದಿನ ಬಂದವನು ದೇಗುಲ ಪ್ರವೇಶದ ಮಾತನ್ನು ಬಿಟ್ಟು ಬೇರೆ ಮಾತನ್ನೆತ್ತಿದನು. ಸ್ವಲ್ಪ ಹೊತ್ತಿನ ಮೇಲೆ, "ನನಗಿನ್ನು ದೇಗುಲ ಪ್ರವೇಶಕ್ಕೆ ಅನುಮತಿ ಕೊಡುವದು ಬೇಡ ರಾಯರೇ!" ಎಂದ.

"ಏಕೆ?" ರಾಮಯ್ಯನವರು ಆಶ್ಚರ್ಯದಿಂದ ಕೇಳಿದರು.

"ನನಗೆ ನಿನ್ನೆ ಒಂದು ಕನಸಾಯಿತು!"

"ಹೂಂ!"

"ಕನಸಿನಲ್ಲಿ ಹಯವದನ ಸ್ವಾಮಿಯನ್ನು ಕಂಡೆ."

"ಹೂಂ!"

'ಆಹಾ! ಏನು ರೂಪು! ಕುದುರೆಯಂತೆ ಹೊಳೆಯುವ ಮುಖ, ಕಿವಿಯಲ್ಲಿ ಕುಂಡಲ, ಕೈಯಲ್ಲಿ ಕಂಕಣ, ಕಾಲಲ್ಲಿ ಗೆಜ್ಜೆ. ಬಹಳ ಅದ್ಭುತ ಸೌಂದರ್ಯ ಮೂರ್ತಿ!'

"ಹಾಂ! ಮತ್ತೆ?"

"ನಾನು ನೋಡಿದೊಡನೆ, ಆಶ್ಚರ್ಯದಿಂದ ಪ್ರಜ್ಞೆ ಹೋದವನಂತೆ ಅಡ್ಡ ಬಿದ್ದೆ."

"ಆ ಮೇಲೆ?"

"ದೇವರು ನನ್ನ ಕೈ ಹಿಡಿದು ಎಬ್ಬಿಸಿದರು."

"ಆಂ! ಭಗವಂತನು ನಿನ್ನನ್ನು ಸ್ಪರ್ಶಿಸಿದನೇ?"

"ಹಾಂ! ಸ್ವಾಮಿ, ಮತ್ತೆ ಹೀಗೆ ಹೇಳಿದರು."

"ಹೂಂ! ಹೇಳು."

"ತೋಮಾ! ನೀನು ದೇಗುಲವನ್ನು ಪ್ರವೇಶಿಸಲು ಏಕೆ ಅಪೇಕ್ಷೆ ಪಡುತ್ತೀ? ನನಗೇ ಅಲ್ಲಿ ಸ್ಥಳವಿಲ್ಲ. ಆ ಚಾಂಡಾಲ ಬ್ರಾಹ್ಮಣರು ನನ್ನನ್ನೂ ಅಲ್ಲಿಗೆ ಪ್ರವೇಶಿಸಲು ಬಿಡುವದಿಲ್ಲ. ದೇಗುಲದಲ್ಲಿರುವವರೆಲ್ಲಾ ಶುದ್ಧ

ಡಾಂಭಿಕರು ! ದೇವರ-ಧರ್ಮಗಳ ಹೆಸರಿನಲ್ಲಿ ಜನರನ್ನು ಅಧೋಗತಿಗೆಳೆಯುತ್ತಿ ವರು ! ನನಗೆ ಅಲ್ಲಿ ಸ್ಥಾನವಿಲ್ಲ; ಸ್ವಾರ್ಥಪುತ್ಥಳಿಗೆ ಮಾತ್ರ ಸ್ಥಾನ! ನನ್ನನ್ನು ಪ್ರವೇಶಿಸಲು ಬಿಡದವರು ನಿನ್ನನ್ನು ಮಾತ್ರ ಬಿಟ್ಟಾರೆಯೇ?' ಎಂದರು. ದೇವರು ದೇವಸ್ಥಾನದಿಂದ ಎಂದೋ ಓಡಿಹೋಗಿದ್ದಾರೆ, ಸ್ವಾಮಿ. ನಾವು ಇನ್ನು ದೇವಸ್ಥಾನದೊಳಕ್ಕೆ ಕಾಲಿಡಲು ಬಯಸುವದಿಲ್ಲ.

ಈ ಉತ್ತರವನ್ನು ಕೇಳಿ, ರಾಮಯ್ಯನವರು ಬೆಪ್ಪಾದರು. ದೇವರು "ಚಾಂಡಾಲ ಬ್ರಾಹ್ಮಣ' ಎಂದು ತನಗೇ ಎಂದಿರಬಹುದೋ?

೨

ನಾಲ್ಕು ವರ್ಷ ಕಳೆದಿದೆ. ಮದ್ರಾಸುಸರಕಾರದಲ್ಲಿ Temple Entry ಕಾನೂನು ತಯಾರಾಗಿದೆ, ಎಂಬ ವದಂತಿ ಬಂದಿದೆ. ಅಲ್ಲದೆ ಪ್ರತಿದಿನ 'ಇಂಡಿಯನ್ ಎಕ್ಸ್‌ಪ್ರೆಸ್' 'ಹಿಂದೂ' ಪತ್ರಿಕೆಗಳಲ್ಲಿ, 'ಹರಿಜನರು ತಿರುಪತಿ ದೇವಸ್ಥಾನವನ್ನು ಪ್ರವೇಶಿಸಿದರು.' 'ಕಾಶಿ ವಿಶ್ವನಾಥ ದೇವಾಲಯವನ್ನು "ವೈಲಿಗೆ" ಮಾಡಿದರು' ಎಂದು ಮುಂತಾಗಿ ವಾರ್ತೆಗಳು. ದಕ್ಷಿಣ ಭಾರತವೆಲ್ಲವೂ ಈ ಮಸೂದೆಗೆ, ಸುಧಾರಣೆಗೆ ಬೆಂಬಲ ಕೊಟ್ಟಿದ್ದರೂ ರಾಮಯ್ಯನವರು ಮಾತ್ರ, 'ನಾವು ಈ ಕಾನೂನನ್ನು ಪ್ರತ್ಯಕ್ಷವಾಗಿ ಸಂಪೂರ್ಣವಾಗಿ ವಿರೋಧಿಸಬೇಕು" ಎಂತ ಹೇಳುತ್ತಿದ್ದರು. ಆದರೆ ಇದೀಗ ನಾಲ್ಕಾರು ತಿಂಗಳುಗಳಿಂದ ಅವರ ಮನಸ್ಸೇನೋ ಬೇರೆಯಾದ ಹಾಗೆ ಕಾಣುತ್ತದೆ.

ಒಂದು ಸಂಜೆ; ಸೂರ್ಯನ ಬಿಸಿಲು ಓರೆಯಾಗಿದೆ. ರಾಮಯ್ಯನವರ ಮನೆಯಂಗಣದ ತೆಂಗಿನ ಮರಗಳ ಉದ್ದ ನೆರಳು, ಅರ್ಧ, ಹಂಚಿನ ಮಾಡಿನ ಮೇಲೂ, ಅರ್ಧ ಅಂಗಣದ ಮೇಲೂ ಬಿದ್ದುಕೊಂಡಿದೆ. ಸಂಜೆಯ ಗಾಳಿ ನುಣ್ಣನೆ ಬೀಸುತ್ತಿದೆ. ಒಟ್ಟಿನಲ್ಲಿ ವಾತಾವರಣವೆಲ್ಲವೂ ಶೀತಲವಾಗಿದೆ, ಪ್ರಶಾಂತ ವಾಗಿದೆ.

ನಾವು ರಾಮಯ್ಯನವರ ಮನೆಜಗಲಿಯಲ್ಲಿ ಕುಳಿತುಕೊಂಡು ಮಾತಾ

ಹುತ್ತಿದ್ದೆವು.

'ಅಂತೂ, ಇನ್ನು ನಿಮ್ಮ ಶುದ್ಧ ಗದ್ದ ನಡೆಯೋ ಹಾಗಿಲ್ಲ. ಹೊಲೆಯ ರನ್ನೂ ದೇಗುಲದೊಳಗೆ ಬಿಡದಿದ್ರೆ ಜೈಲಿಗೆ ಹೋಗಬೇಕಾದೀತು.'

'ಹೊಲೆಯರನ್ನು ದೇವಸ್ಥಾನದೊಳಗೆ ಹೋಗಬಾರದೆಂದು ಹೇಳುವದು ತಮ್ಮದು ಶುದ್ಧ ತಪ್ಪು !'

''ಈ ಚರ್ಚೆ 'ಯು ನೋ' (U. N. O.)ಚರ್ಚೆಗಿಂತಲೂ ಬಹಳ ದೊಡ್ಡದಪ್ಪ. ಊರಲ್ಲಿ ಕೆಲವರು ಮುದುಕರಂತೂ ಎಳ್ಳ ಗುದ್ದುತ್ತಾ, ತಾವಿನ್ನು ದೇವಸ್ಥಾನದ ಹತ್ತಿರ ಸುಳಿಯುವುದಿಲ್ಲವೆಂದು ಭೀಷ್ಮ ಪ್ರತಿಜ್ಞೆ ಯನ್ನೇ ಮಾಡಿದ್ದಾರಂತೆ. ಆದರೆ, ಇವರು ಬಾರದಿದ್ದರೆ ಊರೇನು ಉರು ಟಾಗಿ ಹೋಗುವುದು ? ನಮ್ಮ ಅರ್ಚಕರಂತೂ ಹೊಲೆಯರನ್ನು ಬ್ರಾಹ್ಮಣ ರಿಗಿಂತ ಮೊದಲಾಗಿ ದೇವಸ್ಥಾನದೊಳಗೆ ಬಿಟ್ಟಾರು ! ಏಕಂತೀರಾ ? ನಮ್ಮ ಬ್ರಾಹ್ಮಣರು ಅವರಿಗೆ ದಕ್ಷಿಣೆ ಕೊಡುವುದು ಚಿಲ್ಲರೆ ಸಿಕ್ಕದಿರುವ ಈ ಕಾಲದ ಲ್ಲಿಯೂ ಒಂದು ಪೈ ! ಆದರೆ ಹೊಲೆಯರು ದೇವಸ್ಥಾನಕ್ಕೆ ಹೊಸದಾಗಿ, ಮೊದಲಾಗಿ ಬರುವವರಾದ ಕಾರಣ ರೂಪಾಯಿ, ರೂಪಾಯಿಯೇ ಸುರಿ ದಾರು. ಅದಕ್ಕೆ !''

ಮೇಲಿನ ಎಲ್ಲಾ ಮಾತುಗಳೂ ತರುಣರವು; ಸುಧಾರಣೆಯ ಗಾಳಿ ಬಡೆದವರದು. ಎಲ್ಲರ ಮಾತುಗಳನ್ನು ಕೇಳಿ ನಾನೂ ಒಂದು ಮಾತು ಹೇಳಿದೆ:

'ಹೊಲೆಯರು, ಹೊಲೆಯರು ಅಂತಾರಲ್ಲ. ಈ ಹೊಲೆಯರು ನಮ್ಮ ಕಿಂತ ಏನಾದರೂ ಕೀಳೇ ?'

ವೃದ್ಧರೊಬ್ಬರು ಕೂಡಲೆ ತಮ್ಮ ನಂಜುನುಡಿಯಿಂದ ಉತ್ತರಕೊಟ್ಟರು: "ಅಲ್ಲ ಕಾಣಯ್ಯ; ನಿಮ್ಮ ಹೊಲೆಯರು ಬ್ರಾಹ್ಮಣರಿಗಿಂತ ಕೀಳಲ್ಲ; ಮೇಲೇ ! ಏಕೆಂದರೆ ನಿಮ್ಮ ಒಸವರ್ಣ್ಣದವರು ಹೊಲೆಯರ ಮೈಯಿಂದ ಹಾಲು ಕರೆ

ದಿದ್ದಾರಷ್ಟೆ ! ಆದರೆ ನಮ್ಮ ಬ್ರಾಹ್ಮಣರ ಮೈಯೊಳಗಿರುವುದು ಬರೀ ರಕ್ತವ ಲ್ಲವೇ !'

'ಹಾಗಾದರೆ, ನೀವೇಕೆ ಹೊಲೆಯರು ದೇವಸ್ಥಾನದೊಳಕ್ಕೆ ಬರ ಕೂಡದು ಎನ್ನುವುದು ?'

'ಯಾಕಂತಿಯೋ ? ನಮ್ಮ ಕೀಳು ಜಾತಿಯು ಬ್ರಾಹ್ಮಣರ ಕೀಳು ದೇವಸ್ಥಾನದೊಳಕ್ಕೆ ಬರುವಷ್ಟು ಅಯೋಗ್ಯತೆ ನಿಮ್ಮ ಮೇಲು ಜಾತಿಯ ಹೊಲೆಯರಿಗಿಲ್ಲ. ಅದಕ್ಕೋಸುಗ'

'ಹಾಗಾದರೆ ನಿಮ್ಮ ಲೋಕೈಕ್ಯತೆ ಚೆನ್ನಾಗಿ ಸಾಧಿಸೀತು. ಹೊಲೆ ಯರನ್ನು ಹೀಗೆ, ಹೀಗೆ ದೂರವೇ ಬಿಟ್ಟರೆ ಅಲ್ಲ, ಹಿಂದು-ಹಿಂದೂಗಳೊಳಗೆನೇ ಐಕ್ಯತೆಯಿಲ್ಲದ ನಿಮಗೆ ಹಿಂದೂ-ಮುಸ್ಲಿಂ ಐಕ್ಯತೆಯೇಕೆ ?'

'ಎಲ್ಲಾ ಈ ಬ್ರಾಹ್ಮಣರು ಮಾಡುವುದಪ್ಪ, ಬ್ರಾಹ್ಮಣರು, ಬ್ರಾಹ್ಮ ಣರು ಅಂತ'

'ಬ್ರಾಹ್ಮಣರು, ಬ್ರಾಹ್ಮಣರು ಅಂತ ಏಕೆ ಹಂಗಿಸುತ್ತೀರಯ್ಯಾ ! ಬ್ರಾಹ್ಮಣರಾಗಿ ಹುಟ್ಟಿದ್ದು ನಮ್ಮ ತಪ್ಪೇ ! ನಾವೇನು ಬ್ರಾಹ್ಮಣ ಜನ್ಮ ವನ್ನು ಕಸಿದುಕೊಂಡಿದ್ದೇವೆಯೇ ?'

'ಇಲ್ಲ, ಇಲ್ಲ; ಆದರೆ ಮನುಷ್ಯನ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದೀರಿ !'

'ಏಕಯ್ಯಾ, ಸುಮ್ಮನೆ ತಲೆಹರಟೆ ! ಮುಖ್ಯವಾಗಿ ನಮ್ಮ ರಾಮಯ್ಯ ನವರು ಏನು ಮಾಡುತ್ತಾರೆಂದು ಕೇಳೋಣ. ಅಷ್ಟೇ ನಮಗೆ ಬೇಕಾದದ್ದು !'

ಎಲ್ಲರೂ ರಾಮಯ್ಯನವರ ಕಡೆಗೆ ನೋಡಿದರು. ರಾಮಯನವರ ಮೋರೆ ಬೆಳಗಿತು. ರಾಮಯ್ಯನವರು ದೃಢನಿರ್ಧಾರದಿಂದ ತಲೆಯೆತ್ತಿ ಗಂಭೀರವಾಗಿ ಹೇಳಿದರು: 'ನಾನು ಬದುಕಿರುವವರೆಗೆ, ಹೊಲೆಯರಾಗಲೀ, ಇತರ ಜಾತಿಯವರಾಗಲೀ ಅಥವಾ ಇನ್ನುಳಿದ ಯಾವ ಮನುಷ್ಯರೇ ಆಗಲಿ, ನನ್ನ ದೇಗುಲದೊಳಗೆ ಕಾಲಿಡಲಾರರು. ಅಲ್ಲಿ ನನ್ನ ಹೊರತು ಬೇರಾರಿಗೂ ಸ್ಥಳವಿಲ್ಲ.'

'ಓಹೋ ! ಓಹೋ ! ಗೊತ್ತಾದೀತು ಇನ್ನು ಸ್ವಲ್ಪು ದಿನಗಳಲ್ಲೇ.'

× × × × ×

ಗಾಂಧೀಜಿಯವರು ಹರಿಜನ ಸೇವಾನಿರತರಾದ ಕಾಲದಲ್ಲೇ, ಅವರ ಶಿಷ್ಯರೆಂದು ಹೇಳಿಕೊಂಡು ಕೀರ್ತಿಪಡೆಯಬೇಕೆಂದು ಬಯಸುವವರಲ್ಲಿ ಹಲ ವರು, ಅದಕ್ಕೆ ಯೋಗ್ಯತೆಯಿಲ್ಲದಿದ್ದರೂ ನಮ್ಮೂರಲ್ಲಿ ಹರಿಜನ ಸೇವಾಸಂಘ ವೊಂದನ್ನು ಸ್ಥಾಪಿಸಿ ನಡೆಯಿಸಿಕೊಂಡು ಬಂದಿದ್ದರು. ಈ ಹರಿಜನ ಸೇವಕರು 'ಏನಾದರೂ ಹೊಲೆಯರನ್ನು ದೇವಸ್ಥಾನದೊಳಕ್ಕೆ ಬಿಡುವುದಿಲ್ಲ' ಎನ್ನುವ ವೈದೀಕರ ಮಾತಿಗೆ ವಿರೋಧವಾಗಿ ಬಂಡಾಯವನ್ನೆಬ್ಬಿಸಿ, ಹೊಲೆಯರನ್ನು ದೇವಸ್ಥಾನದೊಳಗೆ ಹೋಗಿಸಿಯೇ ತೀರುತ್ತೇವೆ' ಎಂದು ಪಣತೊಟ್ಟರು. ಈ ರೆಸೊಲ್ಯೂಶನ್ ಅವರ ಕಮಿಟಿಯಲ್ಲಿ ಪಾಸಾದದ್ದೇ ತಡ, ಕನ್ನಡನಾಡಿನ ಮುಖ್ಯ ಮುಖ್ಯ ಪತ್ರಿಕೆಗಳಲ್ಲೆಲ್ಲಾ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಈ ನಿರ್ಧಾರವು ಕಾಣಿಸಿಕೊಂಡಿತು. ತಮ್ಮ 'ಬೆನ್ನು ಬಲವಾಗಿ ತಟ್ಟಿ', ಶಹಬಾಸ್‌ಗಿರಿ ಕೊಡಲೆಂಬ ಉದ್ದೇಶದಿಂದ ಮಹಾತ್ಮರಿಗೂ ಮಂತ್ರಿಗಳಿಗೂ ಈ ನಿರ್ಧಾರವನ್ನು ಬರೆದು ಕಳಿಸಲಾಯಿತು. ಊರಿನ ದೊಡ್ಡ ದೊಡ್ಡ ಮನುಷ್ಯ ರ ಖಜಾನೆಗಳಿಗೆಲ್ಲಾ 'ಮಾರಿ ಬಲೆ' ಬಿದ್ದಿತು. 'ಬಾಳೆಬೈಲಿ'ನ ಬಾಳೆ ಮರ ಗಳಿಗೆಲ್ಲಾ ಬಿರುಗಾಳಿ ಪ್ರಾಪ್ತವಾದಂತಾಯಿತು. ದಟ್ಟವಾಗಿ ಎಲೆ ತುಂಬಿದ್ದ ಮರಗಳಿಗೆಲ್ಲಾ ಶಿಶಿರಕಾಲವು ಬಂದಡಸಿತು. ಕಾಡಿನಲ್ಲಿದ್ದ ಬಿದಿರ ಮೆಳೆ ಗಳೆಲ್ಲಾ ಕಣ್ಮರೆಯಾದವು. ಗೆರಸೊಪ್ಪೆ ಜೋಗಿನಿಂದ ವಿದ್ಯುಚ್ಛಕ್ತಿಯನ್ನು ಅಪಹರಿಸುವ ಏರ್ಪಾಡಾಯಿತು. ಚಪ್ಪರ, ತಳಿರು, ತೋರಣ, ಪತಾಕೆಮಾಲೆ ಬಾವುಟಗಳಿಂದ ಬೀದಿಗಳು ತಮ್ಮನ್ನು ನೋಡಿ ತಾವೇ ಉಬ್ಬುವಂತಾಯಿತು. ಜನರೆಲ್ಲಾ 'ಮೈಸೂರು ಅರಸರ ದಸರಾ ಏನು ಮಹಾ ? ಅವನ ಆನೆಯ ಅಂಬಾರಿ ಯಾವ ಮೂಲೆ ? ನಮ್ಮ ಹೊಲೆಯರ ದಿಬ್ಬಣವನ್ನು ಬಂದು ನೋಡಲಿ, ಮೈಸೂರ ಜನ !' ಎಂದು ಹೇಳುವಷ್ಟರ ಮಟ್ಟಿಗಾದರು.

ಊರಲ್ಲಿ ಇಷ್ಟೆಲ್ಲಾ ಕೋಲಾಹಲ ನಡೆಯುವಾಗ್ಗೆ, ರಾಮಯ್ಯನವರು ಏನೋ ಕಾಯಿಲೆ ಬಂದು ಮಲಗಿ ಕೊಂಡಿದ್ದರು. ಈ ಉತ್ಸವದ ಸಮಾಚಾರ ಅವರಿಗೆ ಗೊತ್ತಾಗಬೇಕಾದರೆ, ಅವರಂಥಃ ಯಾವನಾದರೂ ಒಬ್ಬ ವೈದೀಕ ಹಾಸಿಗೆಯ ಬಳಿಬಂದು ಹೇಳಬೇಕು. 'ಇದಕ್ಕೆ ಪ್ರತಿಯಾಗಿ ಏನು ಮಾ ಡೋಣ ?' ಎಂಬ ಅವರ ದುಗುಡದ ಪ್ರಶ್ನೆಗೆ, 'ನೀವು ಸುಮ್ಮನಿರಿ, ನಾನಿ

ಯವಾಗ ನಿಮಗ್ಯಾಕೆ ಹೆದರಿಕೆ ?' ಎಂದಿವರು ಸಮಾಧಾನ ಹೇಳಬೇಕಾಗಿತ್ತು.

ಹರಿಜನರು ದೇವಸ್ಥಾನವನ್ನು ಪ್ರವೇಶಿಸಲು ನಿಷ್ಕರ್ಷಿಸಿದ ದಿನವು ಬಂತು. ಆ ದಿನ ಬೆಳಗ್ಗೆ ಏಳುಗಂಟೆಗೇ ಹರಿಜನರ ದೊಡ್ಡ ಗುಂಪೊಂದು ಹರಿಜನ ಸೇವಕ ನೇತೃತ್ವದಲ್ಲಿ ನದಿಯ ಬಳಿಗೆ ನಡೆಯಿತು. ಆ ಬಳಿಯಲ್ಲಿಯೇ ಹೊಲೆಯರಿಗೆಲ್ಲಾ ಮೈಗೆ ನದಿಯ ಹಾವಸೆ ಚೆನ್ನಾಗಿ ಅಂಟಿಕೊಳ್ಳುವಂತೆ ಸ್ನಾನವಾಯಿತು. ಬೇಂಡ್, ಓಲಗದವರು ಈ ಮೊದಲೇ ಬಂದಿದ್ದರು. ಸ್ನಾನವಾದ ಮೇಲೆ, ಕ್ರಮವಾಗಿ, ಸಾಲಾಗಿ ದಿಬ್ಬಣ ಹೊರಟಿತು. ಬಿಳಿ ಬಿಳಿಯಾಗಿ, ದಪ್ಪ ದಪ್ಪವಾಗಿ ನಾಮ ಧರಿಸಿದ ಕೆಲವರ ಕೈಯಲ್ಲಿ ಹಣ್ಣು-ಕಾಯಿಯ ತಟ್ಟೆಗಳು; ಮೆರವಣಿಗೆಯ ಸಾಲಿನ ಮೊದಲಲ್ಲಿದ್ದವರ ಕೈಯಲ್ಲಿ ಬಾವುಟಗಳು. ಆಗಾಗ 'ಗಾಂಧಿ ಕೀ ಜೈ' 'ನೆಹ್ರೂ ಕೀ ಜೈ !' 'ಪಟೇಲ್ ಕೀ ಜೈ !' 'ಪ್ರಸಾದ್ ಕೀ ಜೈ !' ಎಂದು ಘೋಷ ! ಇದರೊಡನೆಯೇ ಓಲಗಗಳ 'ಪೀ ಪಿ ಪೀ !' ಬೇಂಡಿನ ರಣಬೇರಿ !

ಮೆರವಣಿಗೆ ದೇವಸ್ಥಾನದ ಬಳಿಬಂದಾಗ ಅದನ್ನು ತಡೆಯುವವರಾರೂ ಅಲ್ಲಿರಲಿಲ್ಲ. ಊಟಕ್ಕೆ ಗತಿಯಿಲ್ಲದೆ, ದೇವರ ಪ್ರಸಾದಕ್ಕಾಗಿ, ಯಾವಾಗಲೂ ದೇಗುಲದ ಪ್ರಾಂಗಣದಲ್ಲಿ ಕಾದುಕೊಂಡಿರುತ್ತಿದ್ದ ಕೆಲವು ' ಉಂಡಾಡಿ ಭಟ್ಟರೂ ' ಇಂದು ಮರೆಯಾಗಿದ್ದರು. ಹರಿಜನ ಸೇವಕರು ಯಾವ ನಿರ್ಬಂಧವೂ ಇಲ್ಲದೆ, ಹೊಲೆಯರನ್ನು ಒಳಗೆ ಕರದುಕೊಂಡು ಹೋದರು. ದಕ್ಷಿಣೆಯ ಸವಿಯನ್ನು ಚೆನ್ನಾಗಿ ತಿಳಿದಿದ್ದ ಅರ್ಚಕರು ಅವರನ್ನು ಆದರದಿಂದ ಬರಮಾಡಿಕೊಂಡರು. ಅರೆಕ್ಷಣದಲ್ಲಿ, ಪೂಜೆಯೂ ಮುಗಿದು, ಪ್ರಸಾದ ವಿನಿಯೋಗವಾಗಿ ಬ್ರಾಹ್ಮಣರ ಖಜಾನೆ ತುಂಬಿತು.

ಪೂಜೆ ಮುಗಿದ ಮೇಲೆ, ಹರಿಜನ ಸೇವಕರ ಅಪೇಕ್ಷೆಯಂತೆ, ಹೊಲೆಯರಿಗೆ ದೇವಸ್ಥಾನದ ವೈಶಿಷ್ಟ್ಯಗಳನ್ನು ತೋರಿಸಲು ಒಬ್ಬ 'ಮಡಿ'-'ಅರ್ಚಕ' ರು ಮುಂದಾದರು. ಹೊಲೆಯರ ಮೈಮುಟ್ಟಿ ಕರೆದುಕೊಂಡು ಹೋಗಿ ದೇವಸ್ಥಾನದ ಕೆರೆಯ ಹಸುರು, ಹಸುರಾದ ನಿರ್ಮಲೋದಕವನ್ನು ತೋರಿಸಿದರು. ಗರ್ಭಗುಡಿಯೊಳಕ್ಕೆ ಕರೆದುಕೊಂಡು ಹೋಗಿ, ಅಲ್ಲಿಯ ಪ್ರಶಾಂತ ವಾತಾವರಣವನ್ನು — ಕುರುಬನಲ್ಲಿಯೂ ಕೂಡಾ ಭಾವೋದ್ರೇಕಗಳ

ನ್ನುಂಟುಮಾಡಿ, ಕಾಳಿದಾಸನನ್ನಾಗಿ ಮಾಡುವ—ಸ್ಥಳವನ್ನು ತೋರಿಸಿದರೆ, ನನಗೆ ಇಷ್ಟೇ ಸಾಕೆಂದು ತೋರುತ್ತದೆ. ಇನ್ನು ಹೆಚ್ಚಿಗೆ ಹೇಳಲ್ಲ, ನಮ್ಮೂರ ದೇವಸ್ಥಾನವೆಂದಾದರೂ, ನಾನು ಸ್ವಲ್ಪ ಮರ್ಯಾದೆಗೊಡ ಬೇಡವೇ ?

ದೇವಸ್ಥಾನವನ್ನೆಲ್ಲಾ 'ಮೈಲಿಗೆ ಮಾಡಿ', ಹೊಲೆಯರು ಹಿಂದಿರು ಗುವಾಗ, ಸೂರ್ಯನು ಪಡುವಣ ದಿಗಂತದಲ್ಲಿ ಕುಳಿತು, 'ಆರು ಗಂಟೆಯಾ ಯಿತು.' ಎನ್ನುತ್ತಿದ್ದ. 'ಚಿಳಿಪಿಳಿ' ಕೂಗುತ್ತಾ, ಹಕ್ಕಿಗಳು ಗೂಡನ್ನು ಹೊಗುವಾಗ, 'ಚಿಳಿಪಿಳಿ' ಮಾತನಾಡುತ್ತಾ, ಹೊಲೆಯರು ದೇವಸ್ಥಾನ ಗೂಡಿನಿಂದ ಹೊರಗೆ ಬಂದರು. ಇನ್ನು ಮೆರವಣಿಗೆ ಚೆದರಬೇಕು, ಎನ್ನು ವಾಗ ಹರಿಜನ ಸೇವಕರೊಬ್ಬರು ಹೇಳಿದರು: 'ನಾವೀಗ ಸೀದಾ ರಾಮಯ್ಯ ನವರ ಮನೆಗೆ ಹೋಗಿ, ಅವರ ಮುಂದೆ ನಮ್ಮ ದರ್ಶನವನ್ನು ತೋರಿ ಸೋಣ ! ನೋಡಿ, ಅವರ ಜೀವವಾದರೂ ಒಮ್ಮೆ ತಲ್ಲಣಿಸಿ ಹೋಗಲಿ." ಸಾಮಧಾರಿಗಳಾದ ಹೊಲೆಯರು, ಬಸವಣ್ಣಗಳಂತೆ, 'ಹೂಂ !' ಎಂದು ತಲೆಯಾಡಿಸಿ, ರಾಮಯ್ಯನವರ ಮನೆಯ ಕಡೆಗೆ ಹೊರಟರು.

ಸಂಜೆಯ ತಂಪಾದ ಗಾಳಿ ಬೀಸುತ್ತಿತ್ತು. ಅದನ್ನು ಸೇವಿಸಲೆಂದು ರಾಮಯ್ಯನವರು ತಮ್ಮ ಹಾಸಿಗೆಯನ್ನು ಜಗಲಿಯಲ್ಲಿ ಹಾಸಿ, ಮಲಗಿ ಕೊಂಡಿದ್ದರು. ಅತ್ತಣಿಂದ, ಹೊಲೆಯರ ತಂಡ ಬರುವ ಹೊತ್ತಿಗೆ ಸರಿ ಯಾಗಿ, ಇತ್ತಣಿಂದ ಬ್ರಾಹ್ಮಣರ—ವೈದೀಕರ – ತಂಡವೊಂದು 'ಧಫಧಫ' ನೆ ಕಾಲುಹಾಕುತ್ತಾ ಬಂದಿತು. ಯುದ್ಧಕ್ಕೆ ಹೊರಟ ಸೈನಿಕರಂತೆ ಬರುವ ಈ ಎರಡೂ ತಂಡಗಳನ್ನು ನೋಡಿ, ರಾಮಯ್ಯನವರು ಬೆಚ್ಚಿ ಎದ್ದು ಕುಳಿತರು.

ಬಂದವರಲ್ಲಿ, ಬ್ರಾಹ್ಮಣರೇ ಮೊದಲಾಗಿ ಕೋಪದಿಂದ ಮಾತ ನಾಡಿದರು. 'ರಾಮಯ್ಯನವರೇ ! ನಿಮ್ಮನ್ನು ಜೀವ ಸಹಿತವಾಗಿ ಕೊಂ ದರೂ; ಪಾಪ ಬರಲಿಕ್ಕಿಲ್ಲ. ನಿಮ್ಮನ್ನು ಕೊಂದೇ ಬಿಡುತ್ತೇವೆ ! ಸಿಗಿದು ಹಸಿಹಸಿಯಾಗಿ ನುಂಗಿಬಿಡುತ್ತೇವೆ. ಹೊಲೆಯರನ್ನು ದೇವಸ್ಥಾನದೊಳಕ್ಕೆ

ಬಿಡುವುದಿಲ್ಲ, ಎಂದಿರಲ್ಲಾ ? ಈಗೇಕೆ ? ಬಿಟ್ಟರಿ ಒಗಳಿ ನಿಮ್ಮದೆಲ್ಲಾ ಬಾಯಿಯಲ್ಲಿ ಮಾತ್ರ ಪಟಾಕಿ. ನಡುವಳಿಕೆಯಲ್ಲಿ ಎಲ್ಲಾ ಪುಕ್ಕಟೆ !'

'ಶಾಂತರಾಗಿ; ಶಾಂತರಾಗಿ ! ಹೊಲೆಯರು ಈಗ ನನ್ನ ದೇವಸ್ಥಾನ ವನ್ನು ಪ್ರವೇಶಿಸಲಿಲ್ಲ; ಇನ್ನು ಮುಂದೆಯೂ ಪ್ರವೇಶಿಸಲಾರರು !'

'ಏಕಯ್ಯಾ, ಸುಳ್ಳು ಬಗುಳುತ್ತೀರಿ !' ಈ ಮಾತನ್ನೂ ಬ್ರಾಹ್ಮಣರೂ, ಹೊಲೆಯರೂ, ಇಬ್ಬರೂ ಒಟ್ಟಾಗಿಯೇ ಹೇಳಿದರು.

'ಸಾವಧಾನ; ಸಾವಧಾನ ! ಸಾವಧಾನರಾಗಿ ಕೇಳಿ ! ನನ್ನ ದೇವ ಸ್ಥಾನವೆಂದರೆ ಯಾವುದು, ಆ ಹಯವದನ ಸ್ವಾಮಿಯ ದೇವಸ್ಥಾನವೆಂದು ಮಾಡಿದ್ದೀರೋ ? ಛೀ ! ಎಂದಿಗೂ ಅಲ್ಲ ! ನನ್ನ ದೇವಸ್ಥಾನವು ಇದೇ ! (ಎದೆಯನ್ನು ತಟ್ಟಿ ತೋರಿಸಿ) ಇಲ್ಲಿ ನನ್ನ ದೇವರು ಸದಾಕಾಲವೂ ಇದ್ದಾನೆ! ಈ ದೇಗುಲವನ್ನು ಯಾವ ಹೊಲೆಯನೂ, ಏಕೆ ಬ್ರಾಹ್ಮಣನೂ ಪ್ರವೇಶಿಸ ಲಾರನು. ಗುಡಿಗೋಪುರಗಳಲ್ಲಿರುವದು ದೇವರಲ್ಲ; ಚಿನ್ನದ ಗೊಂಬೆ ! ಸುಮ್ಮನೆ ಮೂಢಾಚಾರಗಳನ್ನು ನಂಬಿ ಅನುಸರಿಸಿ ನಾವು ನಮ್ಮ ಜೀವನ ವನ್ನು ಹಾಳು ಮಾಡಿಕೊಳ್ಳಬಾರದು. ಇದನ್ನೇ ವಿವೇಕಾನಂದ ಮುಂತಾದ ಮಹಾ ಮಹಾ ವಿದ್ವಾಂಸರು ಬೋಧಿಸಿರುವುದು ! ನಂನಮ್ಮ ದೇವಸ್ಥಾನ ವೆಂನಮ್ಮಲ್ಲೇ ಇರುವಾಗ ದೇವಸ್ಥಾನವನ್ನು ಹೋಗಬೇಕೆಂಬ ಹಂಬಲ ವಾಗಲೀ ನಮ್ಮ ದೇವಸ್ಥಾನದೊಳಗೆ ನೀನು 'ಮೈಲಿಗೆ'ಯವನು ಬರಬೇಡ ದೂರ ಸರಿ ಎಂಬ ಕಠೋರತೆಯಾಗಲೀ ಏಕೆ ?'

ಈ ಮಾತಿನ ಆಳ, ಅರ್ಥ, ತತ್ವ, ಸತ್ಯಗಳನ್ನರಿತು ಎಲ್ಲರೂ ಚಿತ್ರರಂತಾದರು.

---

# ಹೂವಿನ ಹಾರ

" ಏನಾದರೂ ಆ ಹುಡುಗಿಯನ್ನು ಮದುವೆಯಾಗೋದು ನನ್ನಿಂದ ಸಾಧ್ಯವಿಲ್ಲ. "

" ಖೂಳ! ನನ್ನ ಆಸ್ತಿ, ಮನೆ, ಚಿನ್ನಾಭರಣ, ಒಂದು ಚೂರೂ ಸಿಕ್ಕ ಲಾರದು. ಜೋಕೆ! " ಎಂದು ಕುಪಿತರಾಗಿ ನುಡಿದರು ನರಸಿಂಹಯ್ಯ.

" ಆಗಲಿ! "

" ಆಂ! ನನ್ನ ಆಜ್ಞೆಯನ್ನುಲ್ಲಂಘಿಸುವಷ್ಟು ಧೈರ್ಯವೇ ನಿನಗೆ ? "

" ಇದು ತನಕ ನಾನು ಉಲ್ಲಂಘಿಸಿರಲಿಲ್ಲ. ಆದರೆ ಈಗ ಉಲ್ಲಂಘಿಸದೆ ನಿರ್ವಾಹವೇ ಇಲ್ಲ. "

ಮೂರ್ತಿ ಎದ್ದು ಅಲ್ಲಿಂದ ಹೊರಟನು. ಸ್ವಲ್ಪ ಹೊತ್ತಿನಲ್ಲೇ ಕೋಟು, ಟೊಪ್ಪಿಗೆ ಹಾಕಿಕೊಂಡು ಕಾಲಿನ ಜೋಡು ಸದ್ದಾಗುವಂತೆ ಮಾರ್ಕೇಟಿನ ಕಡೆಗೆ ಹೊರಟಿದ್ದು ಕಂಡಿತು. ನರಸಿಂಹಯ್ಯನವರು ಕ್ರೋಧಭರದಿಂದ ಕುದಿಯುತ್ತಿದ್ದರು. ಮೂರ್ತಿ ಹೋದ ಮೇಲೆ ಅಲ್ಲೇ ಕುರ್ಚಿಯ ಮೇಲೆ ಕುಳಿತಿದ್ದ ರತ್ನಾಕರ ವಿರಾಮವಾಗಿ ಸಿಗರೇಟು ಸೇದುತ್ತಾ, " ಮಾವಾ, ನೀವು ದುಡ್ಡಿನ ಬಲದಿಂದ ಮೂರ್ತಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರೆ ಆಗಲಾರದು, " ಎಂದನು.

" ಇವನ ಛಲಕ್ಕೆ ಏನು ಮದ್ದರೆಯಬೇಕಾಯ್ತು, ಹೇಳು. "

" ಕೇಳಿ; ಈಗ ನೀವೂ ಮೂರ್ತಿಯೂ ನಿಮ್ಮ ಮನೆಯೆಂಬ ಗಂಟೆಯ ಎರಡು ಮುಳ್ಳುಗಳ ಹಾಗೆ. ನೀವು ಚಿಕ್ಕ ಮುಳ್ಳು (hour-hand) ಮೂರ್ತಿ ದೊಡ್ಡ ಮುಳ್ಳು (minute-hand). ದೊಡ್ಡ ಮುಳ್ಳು ಚಿಕ್ಕ ಮುಳ್ಳನ್ನು ಮೀರಿ ಮುಂದರಿದಿದೆ. ಚಿಕ್ಕ ಮುಳ್ಳು ಅದನ್ನು ಹಿಂದಕ್ಕೆ ಎಳೆದುಕೊಳ್ಳಲು ಪ್ರಯತ್ನಿಸಿದರೆ ಅದು ಸಾಗದ ಮಾತು. ದೊಡ್ಡ ಮುಳ್ಳು ತಿರುಗಿ ತಿರುಗಿ ಕೊನೆಗಾದರೂ, ಚಿಕ್ಕ ಮುಳ್ಳಿನ ಬಳಿ ಬರಲೇಬೇಕು. ಬೇರೆಲ್ಲಿಗೂ ಹೋಗಲು ಸಾಧ್ಯವಿಲ್ಲ. ನೀವು ಆ ಸಮಯವನ್ನು ಕಾಯಬೇಕು. "

" ಸರಿ; "

ನರಸಿಂಹಯ್ಯನವರು ತಮ್ಮ ಮಗಳನ್ನು, ಅಕ್ಕನ ಮಗ ರತ್ನಾಕರನಿಗೆ ಮದುವೆ ಮಾಡಿ ಕೊಟ್ಟಿದ್ದರು. ಅಕ್ಕನ ಮಗಳು ಸುಗಂಧಿಯನ್ನು ತನ್ನ ಮಗನಿಗೆ ತಂದುಕೊಳ್ಳಬೇಕೆಂಬುದು ಅವರ ಮತ್ತೊಂದು ಆಸೆ ಆದರೆ ಮೂರ್ತಿಯು ಕೌರವನಂತೆ ಒಪ್ಪದೆ ಹೋದುದರಿಂದ ಮನೆಯು ಕುರುಕ್ಷೇತ್ರ ವಾಗಿತ್ತು. ನರಸಿಂಹಯ್ಯನವರು ತಮ್ಮ ಅಳಿಯನ ಸೂಚನೆಯನ್ನು ಮನ್ನಿಸಿ, ಆ ವಿಚಾರವನ್ನು ಅಲ್ಲಿಗೇ ಬಿಟ್ಟುಬಿಟ್ಟರು.

ಮೂರ್ತಿ ಮನೆಯಿಂದ ಹೊರಟವನು ಸೀದಾ ಮಾರ್ಕೇಟಿಗೆ ಬಂದ. ಕಾಯಿಪಲ್ಲೆಯ ಅಂಗಡಿಗಳನ್ನು ದಾಟಿದರೆ ಮುಂದೆ ಸಿಕ್ಕುವುದು ಹೂವಿನ ಭಾಗ. ಮೂರ್ತಿಯು ಆ ಭಾಗಕ್ಕೆ ಬಂದೊಡನೆ ರತ್ನಾ ಕೂಗಿದಳು: ' ಬನ್ನಿ, ಸಾರ್! ' ಮೂರ್ತಿ ಆಕಡೆ ಸುಳಿಯುವಷ್ಟರಲ್ಲಿ, ಎಲೆಯಲ್ಲಿ ಎರಡು ಸೊಗಸಾದ ಮಲ್ಲಿಗೆ ಹೂವಿನ ಮಾಲೆಗಳನ್ನು ಕಟ್ಟಿಟ್ಟಿದ್ದಳು ಮೂರ್ತಿ ಆ ಪೊಟ್ಟಣವನ್ನು ಸೆಳೆದುಕೊಂಡು, ಹತ್ತು ರೂಪಾಯಿ ನೋಟನ್ನು ಅವಳ ಕಡೆಗೊಗೆದು ಕಣ್ಮರೆಯುವಷ್ಟರಲ್ಲಿ ಅಲ್ಲಿಂದ ಮಾಯವಾದನು. ದಿನಂಪ್ರತಿಯೂ ಒಂದೆರಡು ಗಂಟೆ ನಿಂತು ಸರಸಸಲ್ಲಾಪ ಮಾಡುತ್ತಿದ್ದ. ಮೂರ್ತಿಯ ಇಂದಿನ ಈ ವಿಚಿತ್ರ ವರ್ತನೆಯನ್ನು ಕಂಡು ರತ್ನಿ ಆಶ್ಚರ್ಯದಿಂದ ಸ್ವಲ್ಪ ಹೊತ್ತು ಅವನು ಹೋದ ಕಡೆಯೇ ನೋಡುತ್ತಿದ್ದು, ಮತ್ತೆ ತನ್ನ ಕಾರ್ಯದಲ್ಲಿ ಮಗ್ನಳಾದಳು.

§ § § §

ಮೂರ್ತಿಗೆ ಚಿಕ್ಕಂದಿನಿಂದಲೂ ಹೂವಿನಲ್ಲಿ ಕಟ್ಟಕ್ಕರ. ಅವನ ಮನೆಗೆ ಏನು ಹೂ ಬೇಕಾದರೂ ತರುವವನು ಅವನೇ. ಅವನ ತಂದೆ ನರಸಿಂಹಯ್ಯನವರಿಗೆ ಹೂತರುವುದರಲ್ಲಿ ಅಷ್ಟೊಂದು ಮೆಹನತ್ತೂ ಇಲ್ಲ ಅಲ್ಲದೆ ಅದನ್ನು ಕೊಳ್ಳುವುದಕ್ಕೆ ಬೇಕಾದಷ್ಟು ಜ್ಞಾನವೂ ಅವರಲ್ಲಿಲ್ಲ. ಎಷ್ಟೋಬಾರಿ ಮಲ್ಲಿಗೆಯೆಂದು ಮರಮಲ್ಲಿಗೆ ಹೂವನ್ನು ತಂದು ಸೋತು ಹೋಗಿದ್ದರು. ಅಂದಿನಿಂದ ಹೂತರುವ ಕಾರ್ಯವನ್ನು ಮಗನಿಗೇ ಬಿಟ್ಟುಕೊಟ್ಟರು ಶ್ರಾದ್ಧ, ಮುಂಜಿ, ಮದುವೆಗಳ ಸಮಯದಲ್ಲಿ, ಪ್ರತಿ ಶುಕ್ರವಾರ ರಾತ್ರಿ, ಮೂರ್ತಿ ಮನೆಗೆ ಹಿಂದಿರುಗುವಾಗ ಅವನ ಕಿಸೆ 'ಘುಮ್ಮೆಂ'ಬ ಸುವಾಸನೆ ಬೀರುತ್ತಿತ್ತು. ಪತಿಗೃಹದಿಂದ ಅವನ ಸೋದರಿಯರು ಬಂದಾಗಲಂತೂ ಕೇಳುವುದೇ ಬೇಡ

ಅಲ್ಲದೆ, ಏನೂ ವಿಶೇಷವಿಲ್ಲದಾಗಲೂ ಕೆಲವೊಮ್ಮೆ ಹೂ ಮನೆಗೆ ಬರುತ್ತಿತ್ತು. ಮೂರ್ತಿಯ ಈ ಹೂವಿನ ಹುಚ್ಚನ್ನು ಕಂಡು ಅವನ ತಾಯಿ, ಆಗಾಗ ಹೇಳುತ್ತಿದ್ದರು: ' ಮೂರ್ತಿಗೆ ಹೆಂಡತಿ ಬಂದಾಗ ಅವಳಿಗೆ ದಿನನಿತ್ಯವೂ ಹೂವಿನ ಹಬ್ಬ ' ಎಂದು. ಅಷ್ಟು ಹೂಮರುಳ ಮೂರ್ತಿ !

ಮೂರ್ತಿಗೆ ಮೊದಮೊದಲು ಮಾರ್ಕೇಟಿನಲ್ಲಿ, ಒಂದೆರಡು ಬಾರಿ ಕ್ರಿಶ್ಚಿಯನ್ ಹೆಂಗಸರ ಹತ್ತಿರ ವ್ಯಾಪಾರ ಮಾಡುವುದರಲ್ಲೇ ಸಾಕುಸಾಕಾಗಿ ಹೋಯ್ತು. ' ಇವರ ಸಹವಾಸವೇ ಬೇಡ. ' ಎಂದು ಮೂರನೆಯ ಬಾರಿ ಬೇರೆ ಹೂವಾಡಿಗಿತ್ತಿಯರಿಗಾಗಿ ಹುಡುಕಿದನು. ಮಾರ್ಕೇಟಿನ ಕೊನೆಯ ಭಾಗದಲ್ಲಿ ಚಿಕ್ಕಪ್ರಾಯದ ತರುಣಿಯೊಬ್ಬಳು ಕಂಡಳು. ನಗುಮುಖ, ಮಿಂಚುತ್ತಿರುವ ಕಣ್ಣು, ಸಂಪಿಗೆ ವರ್ಣದ ದೇಹ, ಎಳೆ ಪ್ರಾಯ—ಇವೇ ಮೂರ್ತಿಯನ್ನು ಸೆಳೆಯುವುದಕ್ಕೆ ಕಾರಣವಾದವು. ಸ್ವಲ್ಪ ದಿನ ಅವಳೊಡನೆ ವ್ಯವಹಾರ ಮಾಡುವಷ್ಟರಲ್ಲೇ, ಅತ್ಯಂತ ಪರಿಚಿತಿಯುಂಟಾಗಿ, ರತ್ನನೊಡನೆ ಸಲ್ಲಾಪ ಮಾಡುವದರಲ್ಲಿ ಮೂರ್ತಿ ಆಸಕ್ತ ವಹಿಸತೊಡಗಿದನು.

ಒಂದುದಿನ ಎಂದಿನಂತೆ ಮಾರ್ಕೇಟಿಗೆ ಹೋದಾಗ, ಬುಟ್ಟಿಯಲ್ಲಿ ಮಲ್ಲಿಗೆ ಹೂವಿನ ಮಾಲೆಯಿಲ್ಲದುದನ್ನು ಕಂಡು ಮೂರ್ತಿ ಕೇಳಿದನು: " ಏನು ರತ್ನಾ, ಮಲ್ಲಿಗೆಯಿಲ್ಲವೇ ? "

" ಇಲ್ಲ, ಸಾರ್ ! ಸಂಪಿಗೆ, ಕೇದಗೆ, ಜಾಜಿ, ಗುಲಾಬಿ, ಸೇವಂತಿಗೆ" ಎಂದು ಮುಂತಾಗಿ ಪಟ್ಟಿ ಬಿಚ್ಚಿದಳು ರತ್ನ.

" ಊಹೂಂ ! ಅದೆಲ್ಲಾ ಬೇಡ. ಮಲ್ಲಿಗೆ ಬೇಕು. "

" ಹಾಗಾದರೆ ಮನೆಗೆ ಬನ್ನಿ ಸರ್. ಕಟ್ಟಿಕೊಡುತ್ತೇನೆ. "

" ಎಲ್ಲಿ, ನಿನ್ನ ಮನೆ ? "

" ಕಾಲು ಮೈಲಿನೊಳಗೆ. ಹರಿದಾಸ್ ಲೇನಿನಲ್ಲಿ. ಬರುತ್ತೀರಾ ? "

" ನೀನು ಹೊರಟರೆ, ನಿನ್ನ ಈ ಜಾಗೆಗೆ ಗತಿಯೇನು ? "

" ಪರವಾಯಿಲ್ಲ ಸರ್ ! ಮನೆದೇವರಿಗೆ ಸಮರ್ಪಿಸುತ್ತೇನೆ. "

ರತ್ನಾ ಎದ್ದು ಹೊರಟಳು. ಮೂರ್ತಿ ಹಿಂಬಾಲಿಸಿದನು. ಯಾರೂ 'ಕಿಲಾಡಿ'ಗಳು ತಪ್ಪು ಆಲೋಚನೆ ಮಾಡಬಾರದೆಂದು ದೂರದಿಂದಲೇ ಹೋಗು

ತ್ತಿದ್ದನು. ಆಗಾಗ ರತ್ನ ಮೂರ್ತಿ ಇದ್ದಾನೋ, ಇಲ್ಲವೊ ಎಂದು ಹಿಂದೆ ನೋಡುತ್ತಿದ್ದಳು. ಆಗ ಇಬ್ಬರ ಮಂದಹಾಸವೂ ಒಂದುಗೂಡುತ್ತಿತ್ತು.

ಮಾರ್ಗದ ವಿದ್ಯುದ್ದೀಪಗಳು ಬೆಳಗುವ ಹೊತ್ತಿಗೆ ಇಬ್ಬರೂ ರತ್ನನ ಮನೆಯ ಸಮೀಪಕ್ಕೆ ಬಂದಿದ್ದರು. "ಇದೇ ಮನೆ" ಎಂದು ರತ್ನ ಒಳ ಹೊಕ್ಕಳು. ದೊಡ್ಡ ಕಬ್ಬಿಣ ಗೇಟನ್ನು ಸದ್ದಾಗುವಂತೆ ಮುಚ್ಚಿ ಮೂರ್ತಿಯೂ ಒಳಗಾದನು.

ವಿಶಾಲವಾದ ಕಾಂಪೌಂಡು; ಅದರ ನಡುವೆ ಚಿಕ್ಕಮನೆ, ನಾಲ್ಕಾರು ಕೋಣೆಗಳಿರಬಹುದಷ್ಟೆ. ಮನೆ ಚಿಕ್ಕದಾದರೂ ಚೊಕ್ಕವಾಗಿದೆ. ಮನೆಯ ಮುಂದೆ ಅಂಗಳದಲ್ಲಿ ಸ್ವಲ್ಪ ಸ್ವಲ್ಪ ಮಾಸಿದ ರಂಗವಲ್ಲಿ. ಅಲ್ಲೇ ತಿರು ಗಾಡುವ ನಾಯಿಯೊಂದು. ಸುತ್ತಲೂ ವಿಸ್ತಾರವಾದ ಹೂದೋಟ ಆಗ ತಾನೇ ಅರಳಿ ನಗುತ್ತಿರುವ ಹೂಗಳ ಸುವಾಸನೆ ಸರ್ವವ್ಯಾಪಿಯಾಗಿದೆ. ಬಾಡಿದ ಹೂಗಳು ನೆಲದಲ್ಲಿ ಹಾಸಿಗೆಯಾಗಿ ಬಿದ್ದಿವೆ.

ನಾಯಿ ಮೂರ್ತಿಯನ್ನು ನೋಡಿ, 'ಬೌ!' ಎಂದು ಬಗುಳಿ ಓಡಿ ಬಂತು. ರತ್ನ, 'ಹಛಾ!' ಎಂದು ಗದರಿಸಿ, "ಒಳಗೆ ಬನ್ನಿ, ಸಾರ್!" ಎಂದು ಮೂರ್ತಿಗೆ ಹೇಳಿದಳು. ಮೂರ್ತಿ, ತನ್ನ ಮನೆಯೋ ಎಂಬಷ್ಟು ನಿಶ್ಶಂಕೆಯಿಂದ ಒಳಹೊಕ್ಕ. ಪಡಸಾಲೆಗೆ ಅವನನ್ನು ಕರೆದುಕೊಂಡು ಹೋಗಿ, ರತ್ನ, ಹಾಸಿದ್ದ ಜಮಖಾನೆಯಲ್ಲಿ ಕುಳ್ಳಿರಿಸಿ ಒಳಹೋದನು.

ಅಗಲವಾದ ಪಡಸಾಲೆ; ಆ ಮನೆಯಲ್ಲೆಲ್ಲಾ ಅದೇ ದೊಡ್ಡ ಕೋಣೆ. ಬಹಳ ಚೊಕ್ಕಟವಾಗಿದೆ. ನಡುವೆ ಬಣ್ಣಬಣ್ಣದ ಅಗಲವಾದ ಜಮಖಾನೆ. ಗೋಡೆಯಲ್ಲೆಲ್ಲಾ ರಾಜಾ ರವಿವರ್ಮನ ಪಟಗಳು. ಎಲ್ಲಾ ಪಟಗಳಿಗೂ ಬೆಳಿಗ್ಗೆ ಹಾಕಿದ್ದ ಹೂಮಾಲೆಗಳು; ಈಗ ಬಾಡಿ ಹೋಗಿವೆ. ಗೋಡೆಯ ತುತ್ತ ತುದಿಯಲ್ಲಿ ರಾಷ್ಟ್ರಧ್ವಜ. 'ವಂದೇ ಮಾತರಂ' ಎಂದು ಬಣ್ಣದ ಅಕ್ಷರ ಗಳಲ್ಲಿ ಅದರ ಕೆಳಗೆ ಬರೆದಿದೆ. ಸರಳುಗಳಿಗೆಲ್ಲಾ, ಹೊಸದಾಗಿ ರಂಗನ್ನು ಬಳಿದಿದ್ದ ಕಿಟಕಿಗಳಿಗೆ ತೆಳ್ಳನೆಯ ಜವನಿಕೆ; ಎಳೆಗಾಳಿಯಲ್ಲಿ, ಮೇಲಕ್ಕೊ, ಕೆಳಕ್ಕೊ, ಪಕ್ಕಕ್ಕೊ, ಹಾರುತ್ತಾ ಕುಣಿಯುತ್ತದೆ.

ಮೂರ್ತಿಗೆ ಆಶ್ಚರ್ಯವಾಯಿತು 'ಬಡ ಹೂವಾಡಿಗರ ಮನೆ ಇಷ್ಟು ಚೆನ್ನಾಗಿರುತ್ತದೆಯೇ?' ಎಂದು ಮನಸ್ಸಿನಲ್ಲೇ ಭಾವಿಸಿಕೊಂಡ. ಕೋಣೆ

ಯೆಲ್ಲವನ್ನೂ ಒಮ್ಮೆ ಸೂಕ್ಷ್ಮವಾಗಿ ಪರಶೀಲಿಸಿ, ಒಂದು ಸಿಗರೇಟು ಹಚ್ಚಿ ಸೇದತೊಡಗಿದ.

ಆಗ ರತ್ನ ಒಳಗಿನಿಂದ ಬಂದಳು. ಕೈಯಲ್ಲಿ ಬೆಳ್ಳಿಯ ತಟ್ಟೆ ಮತ್ತು ಲೋಟ. ಲೋಟ ತುಂಬಾ ಕಾಫಿ, ತಟ್ಟೆಯಲ್ಲಿ ತಿಂಡಿ, 'ತಗೊಳ್ಳಿ ಸಾರ್' ಎಂದು ಲೋಟವನ್ನೂ, ತಟ್ಟೆಯನ್ನೂ, ಜಮಖಾನದ ಮೇಲಿರಿಸಿದಳು.

"ಇದೇನು ?" ಮೂರ್ತಿ ನಕ್ಕು ಹೇಳಿದ. "ನಾನು ಬಂದದ್ದು ಕಾಫಿ ಫಲಹಾರಕ್ಕಲ್ಲ, ಹೂವಿಗೆ !"

"ಅದು ಸರಿ; ಆದರೆ ಕಾಫಿ ತೆಗೆದುಕೊಳ್ಳಬಾರದೆಂದೇನಾದರೂ ಇದೆಯೇ ?"

"ಛೀ ! ಛೆ! ನಾನು ತೆಗೆದುಕೊಳ್ಳಲಾರೆ."

"ಅದೇಕೆ ? ಸ್ವಜಾತಿಯವರಲ್ಲವೆಂದೇ ?"

"ಅಲ್ಲಪ್ಪಾ! ಆ ಜಾತಿಯ ಭೂತ ನನಗೆ ಹಿಡಿದಿಲ್ಲ."

"ಮತ್ತೇನು, ಹಾಗಾದರೆ ? ತೆಗೆದುಕೊಳ್ಳಿ. ನಮ್ಮ ಮನೆಗೆ ಬಂದವರು ಯಾರೂ ಕಾಫಿ ಕುಡಿಯದೆ ಹೋಗಬಾರದು."

ಮೂರ್ತಿ ಮತ್ತೆ ಹೆಚ್ಚು ಮಾತನಾಡದೆ ಕಾಫಿಲೋಟವನ್ನು ಬರಿದು ಮಾಡಿದ. ತಿಂಡಿಯನ್ನೂ ಅರ್ಧ ತಿಂದು ಮುಗಿಸಿದ ಬರಿದಾದ ಪಾತ್ರೆಗಳನ್ನು ಒಳಗಿರಿಸಿ, ರತ್ನ ಪುನಃ ಹಿಂಬಾಗಿಲಿನಿಂದ ಹೂದೋಟಕ್ಕೆ ಹೋದಳು. ಮೂರ್ತಿ ಮತ್ತೊಂದು ಸಿಗರೇಟನ್ನು ಹಚ್ಚಿ ಆಲೋಚನಾತತ್ಪರನಾದ.

ಸ್ವಲ್ಪ ಹೊತ್ತು ಕಳೆಯಿತು. ಸಾಧಾರಣ ಕತ್ತಲೆಯಾಯಿತು. ಆಗ ರತ್ನನ ತಾಯಿ ಒಳಗಿನಿಂದ ಬಂದು, "ನಮ್ಮ ಹೂದೋಟವನ್ನು ನೋಡುತ್ತೀರಾ ಸಾರ್ !" ಎಂದು ಅವನನ್ನು ಹೂದೋಟಕ್ಕೆ ಕರೆದುಕೊಂಡು ಹೋದಳು.

ಹೂದೋಟದಲ್ಲಿ ಎಲ್ಲಾ ಬಗೆಯ ಹೂಗಿಡಗಳೂ ಇವೆ. ಸುವಾಸಿತವಾದವು ಕೆಲವು, ಅಂದವಾದವು ಕೆಲವು, ಬರೇ ಬಣ್ಣಕ್ಕಾಗಿ ಬೆಳಸಿದ ಹೂಗಿಡಗಳು ಕೆಲವು. ದೂರಕ್ಕೆ ನೋಡಿದರೆ ಮನ್ಮಥನ ಉದ್ಯಾನದ ಹಾಗೆ ಕಾಣುವ ಹೂದೋಟ. ಕೆಲವು ಬಳ್ಳಿಗಳು ಮೇಲೆ ಮರವನ್ನೇರಿ ಹೋಗಿ ವಿಸ್ತಾರವಾದ ಕಾವಣವನ್ನುಂಟು ಮಾಡಿವೆ. ತೋಟದಲ್ಲಿ, ಅಲ್ಲಲ್ಲಿ, ಹೂಗಿಡಗಳ ನಡುವೆ

ಬಾದಾಮಿ, ಪೇರಳೆ, ಜಂಬೂನೇರಳೆ ಮುಂತಾದ ಮರಗಳು ಸಾಲಾಗಿ ಛಟ್ಟಿಯಲ್ಲಿರಿಸಿದ ಕ್ರೋಟನ್ ಗಿಡಗಳು. ನೀರು ಪುಟಿಯುತ್ತಿರುವ ಕಾರಂಜಿಗಳು. ರತ್ನನ ತಾಯಿ, ಮೂರ್ತಿಗೆ ಒಂದೊಂದನ್ನೇ ತೋರಿಸುತ್ತಾ ಮುಂದುವರಿದಳು. ಆಗ ಯಾರೋ ಒಂದು ನಾಯಿ ಬಗಳಿತು ಬಂದವರ‍್ಯಾರೆಂದು ನೋಡುವುದಕ್ಕೆ ರತ್ನನ ತಾಯಿ ಹೋದಳು. ಮೂರ್ತಿ ಅಲ್ಲೇ ಇದ್ದ ಸೊಫಾವೊಂದರ ಮೇಲೆ ಸಿಗರೇಟು ಸೇದುತ್ತಾ ಕುಳಿತುಕೊಂಡನು

ಸ್ವಲ್ಪ ದೂರದಲ್ಲೇ, ಬೇರೊಂದು ಸೋಫಾದಲ್ಲಿ ರತ್ನ ಕುಳಿತುಕೊಂಡು, ಮಲ್ಲಿಗೆಯ ಮೊಗ್ಗುಗಳನ್ನು ನೆಯ್ಯುತ್ತಿದ್ದಳು. ಅವಳ ಎದುರಿಗೆ ಮೊಗ್ಗಿನ ರಾಶಿ, ಮೂರ್ತಿ ಅವಳನ್ನೇ ನೋಡತೊಡಗಿದನು. ಅವಳು ಮಲ್ಲಿಗೆಯನ್ನು ನೆಯ್ಯುವ ರೀತಿ, ಕೈಯ ಬಳುಕಾಟ, ಕೈಯ ಕಂಕಣಗಳ ಗುಲಿ ಗುಲಿ ರವ, ಸೊಬಗಿನ ದೇಹ, ದುಂಡು ಮುಖ–ಎಲ್ಲವನ್ನೂ ನೋಡುತ್ತಾ, ನೋಡುತ್ತಾ, ಮೂರ್ತಿಯು ವಿಕಾರವಶನಾದನು. ಸಂಪೂರ್ಣವಾಗಿ, ಮನ್ಮಥನಿಗೆ ಸೋತು ಹೋದನು.

ಗಂಟೆ ಒಂಭತ್ತಾಯಿತು. ಆಗ ಮಲ್ಲಿಗೆಯ ಎರಡು ಮಾಲೆಗಳನ್ನು ರತ್ನ ನೆಯ್ದು ಮುಗಿಸಿದ್ದಳು ಮೂರ್ತಿ ಅದನ್ನು ತೆಗೆದು ಕೊಂಡು ಮನೆಯ ಕಡೆಗೆ ಕಾಲು ಹಾಕಿದನು ಆ ರಾತ್ರಿಯಿಡೀ ನಿದ್ದೆ ಬರಲಿಲ್ಲ. ಏನೇನೋ ಕನಸುಗಳು; ಸ್ವಪ್ನಗಳು. ರತ್ನಳೂ, ತನ್ನ ಮನೆಯಲ್ಲಿ ಅದೇ ಸ್ಥಿತಿಯಲ್ಲಿದ್ದಳು. ಪ್ರೇಮಿಗಳ ಅವಸ್ಥೆಯೇ ಹಾಗೆ!

ಅಂದಿನಿಂದ ಮೂರ್ತಿ ಮಾರ್ಕೇಟಿಗೆ ಹೋಗುವುದು ನಿಂತು ಹೋಯಿತು. ದಿನಾಲೂ ರತ್ನನ ಮನೆಗೆ ಹೋಗುವುದೇ ಒಂದು ಮುಖ್ಯ ಕಾರ್ಯಕ್ರಮವಾಯಿತು. ಅವಳನ್ನು ಸಂದರ್ಶಿಸದೆ ಇದ್ದರೆ ಮನಸ್ಸಿಗೆ ಶಾಂತಿಯಿಲ್ಲ. ಕಡಿಮೆ ಪಕ್ಷ ಒಂದು ಗಂಟೆಯಾದರೂ ಅವಳೊಡನೆ ಸರಸ ಸಲ್ಲಾಪ ಮಾಡದಿದ್ದರೆ, ಮನಸ್ಸಿಗೆ ತೃಪ್ತಿಯಿಲ್ಲ ಎಂಬ ಹಾಗೆ ಆಗಿಹೋಯಿತು. ರತ್ನಳ ಸ್ನೇಹವನ್ನು ಸಂಪಾದಿಸುವುದರೊಂದಿಗೇ, ಕ್ರಮೇಣ ಅವಳ ಪೂರ್ವ ಚರಿತ್ರೆಯೂ ಮೂರ್ತಿಗೆ ಗೊತ್ತಾಯಿತು.

ರತ್ನಳ ತಂದೆ ಬಹಳ ಧನಿಕರು. ಅವರು ಮುತ್ತಿನ ವ್ಯಾಪಾರ ಮಾಡುತ್ತಿದ್ದರು. ಮುತ್ತು ಹೆಕ್ಕುವ ನೂರು ಹಡಗುಗಳ ಒಡೆಯರು ಅವರಾಗಿದ್ದರು.

ಅವರು ಹುಟ್ಟುವಾಗೇನೋ ಬಹಳ ಗರೀಬರಾಗಿದ್ದರು. ಇಪ್ಪತ್ತು ವರ್ಷದಲ್ಲಿ ಎಸ್. ಎಸ್. ಎಲ್. ಸಿ. ಪರೀಕ್ಷೆಯನ್ನು ಮುಗಿಸಿ, ಚಿಲ್ಲರೆ–ಪಲ್ಲರೆ ಕೆಲಗಳನ್ನು ಮಾಡಿಕೊಂಡು, ಸಾಧಾರಣ ನಾಲ್ವತ್ತು ವರ್ಷ ಪ್ರಾಯವಾಗುವಾಗ ಈ ಮುತ್ತಿನ ವ್ಯಾಪಾರವನ್ನು ಆರಂಭಿಸಿದ್ದರಂತೆ. ಮತ್ತೆ ಇಪ್ಪತ್ತು ವರ್ಷಗಳ ವರೆಗೆ ಈ ವ್ಯಾಪಾರವೂ ಸಾಗಿತು ಹೇರಳ ಧನ ಸಂಪಾದಿಸಿದ ಹಾಗೆ, ಅವರು ಆಗ ದುರ್ವ್ಯಸನಗಳಿಗೆ ಬಿದ್ದು ಹೇರಳ ಧನವನ್ನು ಖರ್ಚು ಕೂಡಾ ಮಾಡಿದರು. ಆದರೂ ವ್ಯಾಪಾರವನ್ನು ಬಿಟ್ಟು ಮನೆಯಲ್ಲೇ ಕುಳಿತುಕೊಂಡಾಗ, ಅವರ ಐಶ್ವರ್ಯವು ಸಾಕಷ್ಟಿತ್ತು ಅವರಿಗೆ ಈ ತನಕ ವಿವಾಹವಾಗಿರಲಿಲ್ಲ. ವಿವಾಹ ಮಾಡಿಸುವ ಹಿರಿಯರಿಲ್ಲದುದರಿಂದ, ಅದು ಹಾಗೆಯೇ ಬಾಕಿಯಾಗಿ ಉಳಿದಿತ್ತು. ಅಲ್ಲದೆ ಸಾಧಾರಣ ನಾಲ್ವತ್ತು ವತ್ಸರಗಳ ವರೆಗೆ, ಅವರು ಮನೆ ಮಠವಿಲ್ಲದೆ ತಿರುಗುತ್ತಿದ್ದವರು ಇಂಥವರಿಗೆ ಯಾರು ತಾನೇ ಹೆಣ್ಣು ಕೊಟ್ಟಾರು ? ಆದರೆ ಈ ಅರವತ್ತನೇ ಮುದಿಪ್ರಾಯದಲ್ಲಿ ಅವರಿಗೆ ಮದುವೆಯಾಗಬೇಕೆಂಬ ಚಪಲ ಹುಟ್ಟಿತು. ಇದೇ ಕಾಲ, ರತ್ನನ ತಾಯಿ, ರಮೆಯ ಮೇಲೆ ಮನಸ್ಸು ನೆಟ್ಟು ಹೋಯಿತು. ಅವರು ಜಾತಿಯಲ್ಲಿ ಬ್ರಾಹ್ಮಣರು. ರಮೆ ಹೂವಾಡಿಗಿತ್ತಿ, ಆದರೂ ಪ್ರೇಮಸಂಬಂಧಕ್ಕೇನೂ ಆತಂಕವುಂಟಾಗಲಿಲ್ಲ. ರಮೆ ಕೂಡಾ, ಅವರು ಮುದುಕರಾದರೂ, ಧನಿಕರೆಂಬುದನ್ನು ತಿಳಿದು ಅವರ ಬಲೆಗೆ ಬಿದ್ದಳು. ಸ್ನೇಹ ಬೆಳೆದ ಒಂದು ತಿಂಗಳೊಳಗಾಗಿ ಮದುವೆಯೂ ಕಳೆದು ಹೋಯಿತು. ಮದುವೆಯಾಗಿ ಒಂದು ವರ್ಷದ ಮೇಲೆ ರತ್ನ ಹುಟ್ಟಿದಳು. ಮಗಳ ಹುಟ್ಟು, ತಂದೆಯ ಸಾವಿಗಾತು. ಇದಾಗಿ ಈಗ ಇಪ್ಪತ್ತು ವರ್ಷ ಕಳೆದಿದೆ.

ಗಂಡನ ಹೇರಳ ಸಂಪತ್ತಿಗೆ ಅಧಿಕಾರಿಣಿಯಾದರೂ ರಮೆ, ತನ್ನ ಕುಲ ಕಸಬನ್ನು ಬಿಡಲಿಲ್ಲ. ಒಂದು ಚಿಕ್ಕ ಕೌಂಪೌಂಡನ್ನು ಕ್ರಯಕ್ಕೆ ಪಡಕೊಂಡು, ಅದರಲ್ಲಿ ಒಂದು ಸಣ್ಣ ಬಂಗಲೆಯನ್ನು ಕಟ್ಟಿಸಿದಳು. ಸುತ್ತಲೂ ಹೂಗಿಡಗಳನ್ನು ಬೆಳೆಸಿದಳು. ಮಗಳು ರತ್ನ ಬೆಳೆಯುತ್ತಾ ಬಂದ ಹಾಗೆಲ್ಲಾ, ತಾಯಿ ಮಾರ್ಕೇಟಿಗೆ ಹೋಗುವುದನ್ನು ನಿಲ್ಲಿಸಿ ಬಿಟ್ಟಳು. ಗೃಹಕೃತ್ಯವು ಅವಳ ಪಾಲಿಗಾಯಿತು. ರತ್ನನೇ ಮಾರ್ಕೇಟಿಗೆ ಹೋಗತೊಡಗಿದಳು. ಅಲ್ಲಿಂದಲೇ ಮೂರ್ತಿಯ ಮತ್ತು ಅವಳ ಸಂಬಂಧ ಪ್ರಾರಂಭವಾಗಿತ್ತು.

† † † †

ಮೂರ್ತಿ ನೋಟನ್ನು ಒಗೆದು ಗೃಹಾಭಿಮುಖನಾದಮೇಲೆ, ರತ್ನ ಕುಳಿತುಕೊಂಡು ಚಿಂತಿಸಿದಳು. ಮೂರ್ತಿಯ ಈ ಹೊಸನಡತೆ ಅರ್ಥ ವಾಗಲಿಲ್ಲ. ಹಾಗೇ ಮೆಲ್ಲನೆ ಕತ್ತಲಾಯಿತು. ಮಾರ್ಕೇಟಿನ ಜನರೂ ಒಬ್ಬೊಬ್ಬರಾಗಿ ಜಾರ ತೊಡಗಿದರು. ರತ್ನ, ಮಾರಾಟವಾಗದೆ ಉಳಿದಿದ್ದ ಹೂಗಳನ್ನು ಲೆಕ್ಕಿಸದೆ, ಎಲ್ಲರಿಂದ ಮುಂದಾಗಿ ಮನೆಯ ಕಡೆಗೆ ವೇಗವಾಗಿ ಸಾಗಿದಳು.

ಮನೆಯಲ್ಲಿ ಕೂಡಾ ಅದೇ ಆಲೋಚನೆ; ಮೂರ್ತಿಯ ಆಲೋಚನೆ ಮಲಗಿದರೂ ಅದೇ! ರಾತ್ರಿ ಹನ್ನೆರಡು ಗಂಟೆಯಾದರೂ ನಿದ್ದೆ 'ಶಿವಾ!' ಎಂದರೆ ಬರಲಿಲ್ಲ. ಮೂರ್ತಿಯೇಕೆ ಹೀಗೆ ಮಾಡಿದ.? ಏನು, ತನಗೆ ಮೋಸ ಗೋಡುವ ಆಲೋಚನೆಯೇ? ಎಂದು ಮುಂತಾದ ಪರಿಭಾವನೆಗಳು, ಸಾಲ ದುದಕ್ಕೆ ಅವರಿಬ್ಬರ ಸ್ನೇಹವು ಬರೇ ಶುದ್ಧ ಸ್ನೇಹವಾಗಿರದೆ ಪ್ರಣಯ ಸ್ನೇಹ ವಾಗಿತ್ತು.

ಮರುದಿನ ರತ್ನ ಮಾರ್ಕೇಟಿಗೆ ಹೋಗಲಿಲ್ಲ. ತಾಯಿ ಕೇಳಿದಾಗ, ಸೌಖ್ಯವಿಲ್ಲೆಂಬ ನೆವವನ್ನು ಮುಂದೂಡಿದಳು. ತನ್ನ ಕೋಣೆಯಲ್ಲಿ ಮಂಕಾಗಿ, ಮೂರ್ತಿಯ ವಿಚಿತ್ರ ನಡತೆಂ ನೇ ಚಿಂತಿಸುತ್ತಾ ಕುಳಿತಿದ್ದಳು. ಆದರೆ ಹಿಂದಿನ ದಿನದ ಮೂರ್ತಿಯ ದುಗುಡವು ಇಂದು ಮಾಯವಾಗಿತ್ತು. ಅವನು ಎಂದಿನಂತೆ ಐದು ಗಂಟೆಯ ಹೊತ್ತಿಗೆ ಉಲ್ಲಾಸ ಚಿತ್ತದಿಂದ ಮಾರ್ಕೇಟಿಗೆ ಹೊರಟನು. ಮಾರ್ಕೇಟಿನಲ್ಲಿ ರತ್ನ ಇಲ್ಲ. ಬಹಳ ಆಶ್ಚರ್ಯವಾಯಿತು. ಬಳಿಯ ಹೆಂಗಸರೊಡನೆ ವಿಚಾರಿಸಿದಾಗ ರತ್ನ ಆ ದಿನ ಮಾರ್ಕೇಟಿಗೆ ಬಂದೇ ಇಲ್ಲವೆಂದು ತಿಳಿಯಿತು. ಏನಾಯಿತು, ಸೌಖ್ಯವಿಲ್ಲವೇ?–ಎಂದು ಮುಂತಾಗಿ ಚಿಂತಿಸುತ್ತಾ, ಉದ್ವೇಗದಿಂದ ರತ್ನನ ಮನೆಗೆ ಹೋದನು.

ಅವನು ಹೋದಾಗ ರಮೆ ಎಲ್ಲೋ ಹೊರಗೆ ಹೋಗಿದ್ದಳು. ರತ್ನ ಒಬ್ಬಳೇ ಒಳಗೆ ಕೋಣೆಯಲ್ಲಿದ್ದಳು. ಮೂರ್ತಿ ಹೋದವನೇ 'ರತ್ನಾ' ಎಂದು ಕೂಗಿದನು ರತ್ನನಿಗೆ ಅದು ಕೇಳಿಸಿದರೂ, ಕೇಳದವಳಂತೆ ಸುಮ್ಮನಿದ್ದಳು. 'ಏನು, ಇಲ್ಲವೇ?' ಎಂದು ಕೋಣೆಯೊಳಗೆ ಇಣುಕಿ ನೋಡಿದರೆ ಕುಳಿ ತಿದೆ ಕುರ್ಚಿಯ ಮೇಲೆ ರತ್ನನ ಮೂರ್ತಿ

" ಏನು, ಕರೆದುದು ಕೇಳಿಸಲಿಲ್ಲವೇ ? " ಎಂದು ಹತ್ತಿರ ಹೋದನು. ರತ್ನ ಮಾತನಾಡಲಿಲ್ಲ.

" ಏನು, ಬಹಳ ಕೋಪ ? "

ಮಾತಿಲ್ಲ.

" ಏನು, ಬಾಯಿ ಬರುವದಿಲ್ಲವೇ ? "

ಮೌನ.

" ಹೋ ! ಗೊತ್ತಾಯಿತು. ರತ್ನ ಕಲ್ಲಾಗಿ ಹೋಗಿಬಿಟ್ಟಿದ್ದಾಳೆ. ಕಲ್ಲು, ಪಾಪ ! ಹೇಗೆ ಮಾತಾಡೀತು ? ನಾನು ಇನ್ನು ಇಲ್ಲಿಂದ ಜಾರುವುದೇ ಒಳ್ಳೆಯದು ! " ಎಂದು ಮೂರ್ತಿ ಹೊರಡಲಣಿಯಾದ.

" ಹೂಂ ! ಇವತ್ತು ಇಷ್ಟು ರಂಗು ಮಾಡುವವರು ನಿನ್ನೆ ಏಕೆ ಹಾಗೆ ಮಾಡಿದ್ದು ?" ಅಂದಳು ರತ್ನ.

" ಹಾಂ ! ನಿನಗೆ ಹಾಗಾದರೆ ಬಾಯಿ ಬರುತ್ತದೆ" ಎಂದು ಮೂರ್ತಿ ಪುನಃ ಹತ್ತಿರ ಬಂದನು. " ಕುಳಿತುಕೊಳ್ಳಲು ಅಪ್ಪಣೆಯಾಗಬೇಕು. " ಎಂದು ಕುರ್ಚಿಯೊಂದನ್ನೆಳೆದು ಕುಳಿತುಕೊಂಡನು. " ಯಾಕೆ ? ನಾನು ಬಂದಾಗ ಬಹಳ ಕೋಪ ಬಂದ ಹಾಗಿತ್ತಲ್ಲಾ ಅಮ್ಮನವರಿಗೆ. ".

" ಮತ್ತೆ ನಿನ್ನೆ ಏಕೆ, ಹಾಗೆ ಮಾಡಿದಿರಿ ? "

ಈ ಮಾತನ್ನು ಕೇಳಿ ಮೂರ್ತಿಯ ತಮಾಷೆಯೆಲ್ಲಾ ಹಾರಿಹೋಯಿತು. ಮೋರೆ ಮ್ಲಾನವಾಯಿತು. ಹಿಂದಿನ ದಿನದ ಘಟನೆಯು ನೆನಪಾಯಿತು. ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ, " ರತ್ನ, ನಿನ್ನೆ ನಮ್ಮ ಮನೆ ಕುರುಕ್ಷೇತ್ರ ಯುದ್ಧ ಭೂಮಿಯ ಹಾಗಿತ್ತು " ಎಂದನು.

ರತ್ನ ನಕ್ಕು, " ಅದೇಕೆ ? " ಎಂದು ಕೇಳಿದಳು.

" ಮದುವೆ ಮಾಡಿಕೊಳ್ಳೆಂದು ತಂದೆಯವರು ಒತ್ತಾಯಿಸಿದರು. "

ರತ್ನ ಮಾತಾಡಲಿಲ್ಲ.

" ಆಸ್ತಿ, ಚಿನ್ನಾ, ಬಣ್ಣಾ, ಒಂದೂ ಕೊಡೋದಿಲ್ಲ, ನಡೆ ಎಂದು ಗರ್ಜಿಸಿದರು "

" ಅಂತೂ ಇದರಲ್ಲಿ ಸೋತುಹೋಗುವವಳು ನಾನು. "

" ಏಕೆ ? ನಾನು ನಿನ್ನ ಕೈ ಬಿಡುತ್ತೇನೆಂದು ಭಾವಿಸಿದೆಯಾ ? "

" ಹಾಗಾದರೆ ತಂದೆಯ ಮಾತನ್ನು ಮೀರಿ ನಡೆಯುತ್ತೀರಾ ? "

" ಹೌದು; ಒಟ್ಟಾರೆ ಉಭಯ ಸಂಕಟ ! "

" ಹೋಗಲಿ, ಬೇಡ; ನಾನು ಹಾಳಾದರೂ ಚಿಂತಿಲ್ಲ. ನೀವು ಹಾಳಾಗುವುದು ಬೇಡ, ನನ್ನ ಸ್ನೇಹವನ್ನು ಬಿಟ್ಟುಬಿಡಿ. "

" ಛೆ ! ಛೆ ! ಅದೆಂದಿಗೂ ಸಾಧ್ಯವಿಲ್ಲ. "

" ಹೌದು; ಪ್ರೇಮವೆಂಬುದು ಆಳವಾದ ಮಡುವಿನ ಹಾಗೆ, ಅದರಲ್ಲಿಳಿದರೆ ಸಾಕು; ವಿಘ್ನವಿಡ್ಡೂರವೆಂಬ ನೆಗಳೆ ಬಂದು ಹಿಡಿಯುತ್ತದೆ. "

" ಯಾಕೆ, ಆ ನೆಗಳೆಯನ್ನು ಕೊಲ್ಲಲಾರದಷ್ಟು ಹೇಡಿಯೇ ನಾನು?"

" ಅಯ್ಯೋ ! ಏನು ಮಾತಾಡುತ್ತೀರೆಂಬುದರ ಅರಿವಾದರೂ ಇದೆಯೇ ನಿಮಗೆ ? "

" ಏನು, ಮಾತಾಡಿದೆ ? "

" ತಂದೆಯನ್ನೇ ಕೊಲ್ಲುತ್ತೇನೆ ಎಂದಿರಲ್ಲಾ. "

" ಹಾಗೆಲ್ಲಂದೆ ? "

" ನೆಗಳೆಯೆಂದರೆ, ನಿಮ್ಮ ತಂದೆಯಲ್ಲವೇ ? "

" ನೀನೊಂದು ಹುಚ್ಚು ! ನೀನೇ ಅಲ್ಲವೇ ನೆಗಳೆಯನ್ನು ವಿಘ್ನವಿಡ್ಡೂರಗಳಿಗೆ ಹೋಲಿಸಿದವಳು ? "

" ಹಾಗೋ ! ಸರಿ; ಒಂದು ವೇಳೆ ನೆಗಳೆಯು ಬಹಳ ಪ್ರಬಲಕಾರಿಯಾದರೆ ? "

" ಹ್ಞು ! ನಿನಗಿನ್ನೂ ತಿಳಿಯದು. ಪ್ರೇಮವೆಂಬುದು ಮಹಾ ಶಕ್ತಿ. ವೈಜ್ಞಾನಿಕನಿಗೂ ಬಗ್ಗದ ಶಕ್ತಿ. ಅದರ ಮುಂದೆ ಬೇರಾವ ಶಕ್ತಿಗಳೂ ನಿಲ್ಲಲಾರವು. "

ಮತ್ತೆ ರತ್ನ ಮಾತನಾಡಲಿಲ್ಲ. ಕಾಫಿ ಕುಡಿಯಲು ಬನ್ನಿ, ಎಂದು ಒಳಗೆ ಕರೆದುಕೊಂಡು ಹೋದಳು.

ರತ್ನ—ಮೂರ್ತಿಯ ಪ್ರೇಮಲತೆ ಬಹಳ ಉದ್ದವಾಗಿ ಬೆಳೆದು ಹೋಯಿತು. ಮೂರ್ತಿ ರತ್ನನ ಮನೆಯನ್ನು ಸಂದರ್ಶಿಸುವುದೂ ಅಧಿಕವಾಗಿ ಹೋಯಿತು. ಎಷ್ಟೋ ಬಾರಿ ಮೂರ್ತಿ ರಾತ್ರಿ ಮನೆಗೆ ಹೋಗದೆ ರತ್ನನ

ಮನೆಯಲ್ಲಿ ಬಿದ್ದುಕೊಂಡಿರುವುದೂ ಇತ್ತು. ನರಸಿಂಹಯ್ಯನವರು ಮಾತ್ರ ಒಳಗೊಳಗೇ ಕುದಿಯುತ್ತಿದ್ದರು. ಯಾವುದೋ ಬೇಡನ ಬಲೆಯಲ್ಲಿ ಈ ಪ್ರಾಣಿ ಸಿಕ್ಕಿದೆ. ಅದರಿಂದಲೇ ಹೀಗೆ 'ಮದುವೆ ಬೇಡ ಅನ್ನುತ್ತದೆ' ಎಂಬುದು ಅವರಿಗೆ ಸಿದ್ಧಾಂತವಾಗಿ ಹೋಯಿತು. ಅವರಿಗೆ ಸಿಟ್ಟು ಉಕ್ಕುಕ್ಕಿ ಬರುತ್ತಿದ್ದರೂ, ಅಳಿಯನ ಮಾತಿಗೋಸ್ಕರವಾಗಿ ಎಲ್ಲವನ್ನೂ ಸಹಿಸಿಕೊಂಡಿದ್ದರು. ಇಲ್ಲವಾದರೆ ಮೂರ್ತಿಯನ್ನು ಏನು ಮಾಡಿ ಬಿಡುತ್ತಿದ್ದರೋ ? ಅಳಿಯನು ಹೇಳಿದ ಆ ಸಮಯವನ್ನೇ ಕಾಯುತ್ತಿದ್ದರು.

ಆ ಸಮಯವೂ ಬಂತು. ದಿನ ಹೋದಂತೆ, ಮೂರ್ತಿಗೆ ಈ ಗುಪ್ತ ಪ್ರಣಯವು ಸಾಕಾಯಿತು. ಬಹಿರಂಗವಾಗಿ, ವಿಹಾರಕ್ಕೆ ಸಿನೆಮಕ್ಕೆ ಹೋಗಲು ಜೊತೆಗಾತಿಯೊಬ್ಬಳು ಬೇಕಾದಳು. ರತ್ನನನ್ನು—ಪರಜಾತಿಯವಳನ್ನು— ಅವನು ತನ್ನ ಸೂಳೆಯೆಂದು ಕರೆಯದಿದ್ದರೂ, ಪತ್ನಿಯೆಂದು ಕರೆಯಲು ಸಿದ್ಧನಿರಲಿಲ್ಲ. ಸಾಲದುದಕ್ಕೆ ಅವನ ಗೆಳೆಯರೆಲ್ಲರೂ, ' ಒಂದು ಮಿಸೀಸನ್ನು ಮಾಡಿಕೋ ! ' ಎಂದು ಅವನನ್ನು ಒತ್ತಾಯಿಸುತ್ತಿದ್ದರು. ಮೂರ್ತಿ ಕ್ರಮೇಣ ಅವರಿಗೆ ವಿಧೇಯನಾದನು.

ಒಂದು ದಿನ ಸಾಯಂಕಾಲ ಮೂರ್ತಿ ಎಂದಿನಂತೆ, ರತ್ನನ ಮನೆಗೆ ಹೋಗಿದ್ದನು. ಉದ್ಯಾನದಲ್ಲಿ ಕಲ್ಲುಮಂಚದ ಮೇಲೆ ಕುಳಿತುಕೊಂಡು, ಆಕಾಶದಲ್ಲಿ ತೇಲುತ್ತಿದ್ದ ಬೆಳ್ಮುಗಿಲನ್ನು ನೋಡುತ್ತಾ, ಸುಖಸಲ್ಲಾಪದಲ್ಲಿ ಮಗ್ನರಾಗಿದ್ದರು. ಇದಕ್ಕಿದ್ದ ಹಾಗೆಯೇ ಮೂರ್ತಿ ತಮಾಷೆಯಾಗಿ, " ನೋಡು, ರತ್ನಾ ! ನಾನು ನಿನ್ನನ್ನು ಬಿಟ್ಟು, ಬೇರೊಬ್ಬಳನ್ನು ಮದುವೆಯಾಗುತ್ತೇನೆ. ನೀನೇನು ಮಾಡುತ್ತೀ ? " ಅಂದನು.

ರತ್ನನೇನೂ ಅದಕ್ಕೆ ಬಿಡಲಿಲ್ಲ. ನಕ್ಕು, "ಹಾಗೋ! ಅದಕ್ಕೆ ನಾನೇನೂ ಹೆದರುವ ಹಾಗಿಲ್ಲ, ಎಂದಳು.

" ಏಕೆ ? "

" ನಿಮಗೆ ಗೊತ್ತಿಲ್ಲವೇ ? ಈಗ " 'ಎಂಟಿ ಬೈಗಮಿ(Anti-Bigamy) ಲಾ' ಪ್ರಚಾರದಲ್ಲುಂಟು.

" ಹಾಗೆಂದರೆ ? "

" ಹಾಗೆಂದರೆಯೇ ? ಆ ' ಲಾ 'ವಿನ ಪ್ರಕಾರ, ನೀವು ಇನ್ನೊಬ್ಬಳನ್ನು ಮದುವೆಯಾದರೆ ನಾನು ಕೋರ್ಟಿನಲ್ಲಿ ವ್ಯಾಜ್ಯ ಹೂಡುತ್ತೇನೆ. ನಿಮ್ಮ ಆಸ್ತಿಯನ್ನೆಲ್ಲಾ ವಸೂಲ್ಮಾಡಿಕೊಳ್ಳುತ್ತೇನೆ. ಮತ್ತೆ, ನಿಮಗೂ ನಿಮ್ಮ ನವ ವಧುವಿಗೂ, ಭಿಕ್ಷೆಯೇ ಗತಿ ! "

" ಆದರೆ ನಾನು ನಿನ್ನನ್ನು ಮದುವೆಯಾಗಿದ್ದೇನೆಂಬುದಕ್ಕೆ 'ಪ್ರೂಫ್' ಏನು ? "

" ಅಯ್ಯೋ ! ' ಪ್ರೂಫ್ ' ಬೇಕೋ ? ' ಪ್ರೂಫ್ ' ಕೂಡಾ ಸಿದ್ಧ ವಾಗುತ್ತಾ ಇದೆ. "

" ಏನದು ? "

ರತ್ನ ಹೊಟ್ಟೆ ಹಣ್ಣಾಗುವಂತೆ ನಕ್ಕಳು. ಮತ್ತೆ ಮೆಲ್ಲನೆ, " ನಾನು ಗರ್ಭಿಣಿ " ಎಂದಳು.

ಇದನ್ನು ಕೇಳಿ ಮೂರ್ತಿ ಪೆಚ್ಚಾದನು. ಕಾರ್ಯ ವಿಪರೀತಕ್ಕಿಟ್ಟು ಕೊಂಡಿತೆಂದು ಬಗೆದನು. ಇನ್ನು ಈ ವ್ಯಾಪಾರವನ್ನು ಸಂಪೂರ್ಣವಾಗಿ ನಿಲ್ಲಿ ಸಬೇಕು, ಇಲ್ಲವಾದರೆ ಮಾನ ಹೋದೀತು ಎಂದುಕೊಂಡನು.

ಅದೇ ರಾತ್ರಿ, ಮನೆಗೆ ಹಿಂದಿರುಗಿದಾಗ, ನರಸಿಂಹಯ್ಯನವರು ತಮ್ಮ ವಿಚಾರ ವೇದಿಕೆಯನ್ನು ಮುಂದಿಟ್ಟರು. ರಾಮರಾಯರು ಬಂದರು. ೫,೦೦೦ ಕೊಡಲು ಸಮ್ಮತಿಸಿದ್ದಾರೆ. ಬರುವ ಇಪ್ಪತ್ತೈದನೆಯ ತಾರೀಕಿಗೆ ಶುಭ ಮುಹೂರ್ತವಿದೆ. ಇತ್ಯಾದಿ ಮೂರ್ತಿಯು ಎಲ್ಲದಕ್ಕೂ ಬಸವನಂತೆ ತಲೆ ಯಾಡಿಸಿದನು. ಮರುದಿನವೇ ಲಗ್ನವು ನಿಶ್ಚಯವಾಗಿ ಹೋಯಿತು.

‡ ‡ ‡ ‡

ಸುಮಾರು ಎರಡು ವಾರಗಳಿಂದಲೂ, ಮೂರ್ತಿಯು ಬಳಿ ಸುಳಿಯದಿದ್ದುದರಿಂದ, ರತ್ನ ಬಹಳ ದುಃಖಕ್ಕೀಡಾಗಿದ್ದಳು. ದಿನವಿಡೀ ಅದೇ ಯೋಚನೆಯಾಗಿದ್ದುದರಿಂದ ರಾತ್ರಿ ಮಲಗಿದರೂ ದುಸ್ವಪ್ನಗಳು ಕವಿದು ಚಿತ್ತವನ್ನು ಅಲ್ಲೋಲ ಕಲ್ಲೋಲ ಮಾಡಿ ಬಿಡುತ್ತಿದ್ದವು. ಸ್ವಪ್ನಗಳನ್ನು ನಂಬಬಾರದು ಎಂದು ಯಾರೋ ಒಬ್ಬ ಆಧುನಿಕ ಮಹಾಶಯರು ಹೇಳಿದುದನ್ನು ಅವಳು ಕೇಳಿದ್ದಳು. ಆದ್ದರಿಂದ ಅದನ್ನು ನಂಬಲಿಲ್ಲ. ಆದರೆ, ಇದು ನಂಬಬೇಕಾದ ಸ್ವಪ್ನವೆಂದು, ಪಾಪ, ಅವಳಿಗೇನು ಗೊತ್ತು ?

ಒಂದು ಆದಿತ್ಯವಾರ, ಸಂಜೆ; ರಮೆಯು ಒತ್ತಾಯಕ್ಕೆ ಬೇಕಾಗಿ, ರತ್ನ ಮಾರ್ಕೇಟಿಗೆ ಹೊರಟಳು. ಇಂದಾದರೂ ಮೂರ್ತಿ ಬಾರದಿರಲಾರನೆಂದು, ಭಾವಿಸಿ ಎರಡು ಸೊಗಸಾದ ಮಲ್ಲಿಗೆ ಹೂವಿನ ಹಾರಗಳನ್ನು ಕುಕ್ಕೆಯಲ್ಲಿರಿಸಿ ಕೊಂಡೇ ಹೋದಳು. ಆದರೆ........? ಕತ್ತಲೆ ಕವಿದು ಮಾರ್ಕೇಟಿನ ವಿದ್ಯುದ್ದೀಪಗಳು ಹೊತ್ತಿಕೊಂಡವು. ಮೂರ್ತಿ ಬರಲಿಲ್ಲ. ರತ್ನ ನೋಡುತ್ತಿದ್ದಂತೆಯೇ ನರಸಿಂಹಯ್ಯನವರು, ಅವಳ ಎಡಗಡೆಗೆ ಕೂತ ಹೆಂಗಸಿನೊಡನೆ, ಬಗೆಬಗೆಯ ಹೂವುಗಳನ್ನು ಕೊಂಡು ಕೊಂಡು ಅವಸರವಸರವಾಗಿ ಹೊರಟು ಹೋದರು. ರತ್ನನ ಚಿಂತೆ ಇನ್ನೂ ಹೆಚ್ಚಿತು.

ಕತ್ತಲೆಯು ಹೆಚ್ಚಾದುದರಿಂದ ಹಾಗೆಯೇ ಮನೆಗೆ ಹೊರಟಳು ದಾರಿಯಲ್ಲಿ ಯಾರೋ, ' ಮೂರ್ತಿಗೆ ಇಂದು ಮದುವೆ ' ಎಂದಂತಾಯಿತು. ಕೇಳಿ ರತ್ನನಿಗೆ ವಜ್ರಾಘಾತವಾದಂತಾಯಿತು. ಈ ವಾರ್ತೆ ನಿಜವೇ ? ಯಾರನ್ನು ಕೇಳಿ ತಿಳಿದುಕೊಳ್ಳುವುದು........? ಹಾಗೆಯೇ ಮನೆಗೆ ಬಂದಳು. ಕೋಣೆಯಲ್ಲಿದ್ದ ತನ್ನ ಚಿತ್ರಕ್ಕೂ, ಮೂರ್ತಿಯ ಚಿತ್ರಕ್ಕೂ ಕುಕ್ಕೆಯಲ್ಲಿದ್ದ ಎರಡೂ ಹಾರಗಳನ್ನು ಹಾಕಿದಳು. ಮೊದಲೇ ಕಣ್ಣಿನಿಂದ ಕಣ್ಣೀರು ಹನಿ ಹನಿಯಾಗಿ ಸುರಿಯುತ್ತಿತ್ತು. ಈಗ ಬಿರುಸೋನೆಯೇ ಕರೆಯಿತು. ಆ ರಾತ್ರಿ ಕಣ್ಣೀರ ಕಾಲ್ವೆಯಲ್ಲಿ ತೇಲುತ್ತಲೇ ಬೆಳಗಾಯಿತು.

ಮೂರ್ತಿಗಾದರೂ ಚಿತ್ತಸ್ವಾಸ್ಥ್ಯವಿದ್ದಿರಲಿಲ್ಲ. ಅನ್ಯಾಯವಾಗಿ ಹೆಣ್ಣು ಮಗಳೊಬ್ಬಳ ಜೀವನವನ್ನು ತಾನು ಹಾಳು ಮಾಡಿದೆನೆಂದು, ಆ ರಾತ್ರಿಯೆಲ್ಲಾ ಪರಿತಪಿಸಿದನು. ಆದರೆ ಎಲ್ಲವೂ ದೈವಲೀಲೆ !

ಮರುದಿನ ಬೆಳಗಾಯಿತು; ಸಾಧಾರಣ ಒಂಭತ್ತು ಗಂಟೆಯ ಸಮಯ. ಹೂದೋಟಕ್ಕೆ ಹೋಗಿದ್ದ ರತ್ನ ಹಿಂದಿರುಗಿ ಬರುತ್ತಿದ್ದಳು. ಆಗ ಮನೆಯ ಕಾಲ್ದಾರಿಯನ್ನು ದಾಟಿ ಮೂರ್ತಿ ತೆರಳುವುದು ಕಂಡಿತು. ರತ್ನ ಗಟ್ಟಿಯಾಗಿ ಅವನನ್ನು ಕರೆದಳು. ಆದರೆ, ಮೂರ್ತಿ ಹಿಂದಿರುಗಿ ನೋಡದೆ, ನಿಲ್ಲದೆ, ವೇಗವಾಗಿ ಹೊರಟು ಹೋದನು. ರತ್ನ ಉದ್ವೇಗದಿಂದ ತನ್ನ ಕೋಣೆಗೆ ಬಂದಳು. ಆದರೆ....ಅಲ್ಲಿ....ನೋಡುವುದೇನನ್ನು........?

ಮೂರ್ತಿಯ ಚಿತ್ರದ ಮೇಲಿದ್ದ ಹಾರ ಮಾಯವಾಗಿದೆ. ರತ್ನನ ಚಿತ್ರದ ಮೇಲಿದ್ದ ಹಾರ ಬಾಡಿಹೋಗಿದೆ. ಅಲ್ಲದೆ ಮೇಜಿನ ಮೇಲೆ ರತ್ನನಿಗೆ

ಮೂರ್ತಿಯು ಚಿಕ್ಕದೊಂದು ಕಾಗದ, ಅದರಲ್ಲಿ, "ನಾನು ಮಾಡಿದ ಅಪ ರಾಧವನ್ನು ದಯವಿಟ್ಟು ಕ್ಷಮಿಸು" ಎಂದಿದೆ.

ರತ್ನನಿಗೆ ಒಡನೆಯೇ, ಎಲ್ಲವೂ ಅರ್ಥವಾಯಿತು ಹಾಗೆಯೇ ಪ್ರಜ್ಞೆ ದಪ್ಪಿ, 'ಧೊಪ್ಪೆಂ'ದು ಅವಳು ನೆಲದ ಮೇಲೊರಗಿದಳು. ಒಳಗಿನಿಂದ ರಮೆ ಓಡಿಬಂದಳು.

---

# ಕುಂಕುಮ



ಪುರುಷೋತ್ತಮರಾಯರು ತಮ್ಮ ಕಾರ್ಯಗಳನ್ನೆಲ್ಲಾ ಮುಗಿಸಿ ಕೊಂಡು, ಸಾಯಂಕಾಲ ನಾಲ್ಕು ಗಂಟೆಗೆ ಪೇಟೆಗೆ ಹೊರಡಲು ಸಿದ್ಧರಾಗಿ ದ್ದರು. ಹಿಂದಿನಿಂದ ಏನೋ ಸದ್ದಾದಂತಾಗಿ ಹಿಂದಿರುಗಿ ನೋಡುತ್ತಾರೆ— ಬಾಗಿಲಲ್ಲಿ ಗೃಹಿಣಿ !

"ಏನು ?" ಎಂದು ಗೋಣಲ್ಲಾಡಿಸಿ ಕೇಳಿದಳು

"ಕುಂಕುಮ ಮುಗಿದಿದೆ; ತರಬೇಕು."

"ಹಾಂ ! ಮುಗಿಯಿತೇ ?"

"ನಾನೇನೂ ಕುಂಕುಮವನ್ನು ಭಕ್ಷಿಸಲಿಲ್ಲ. ನೀವು ಕುಂಕುಮ ತಂದದ್ದು ಯಾವಾಗ, ನೆನಪಿದೆಯೇ ?"

"ಹಾಗಲ್ಲ !"

"ಮತ್ತೇನು ? ಪೇಟೆಯಲ್ಲಿ ಕುಂಕುಮಕ್ಕೆ 'ಬರ' ಬಂದಿದೆಯೇ ?"

"ಹಾಂ ! ಬರವೇ ಸರಿ !" ರಾಯರು ಮುಗುಳುನಗು ಸೂಸುತ್ತಾ ಹೇಳಿದರು. "ಆ ನಿನ್ನ ದಾಸಿಯ ಮುದಿಗೊಡ್ಡು ತಾಯಿ ಜೀವಿಸಿಕೊಂಡಿದ್ದ ಕಾಲದಲ್ಲಾದರೆ, ಒಂದು ವೇಳೆ, 'ಬರ' ಬರುತ್ತಿತ್ತೋ ಏನೋ ? ಈಗ ಹೇಗೆ ತಾನೇ ಬರ ಬಂದೀತು ?"

" ನಿಮಗೆಷ್ಟು ಬಾರಿ ಹೇಳಲಿ, ಇಂಥ ಮಾತನಾಡಿ ಆ ದಾಸಿಯ ಮನಸ್ಸಿಗೆ ಗಾಸಿ ಮಾಡಬೇಡಿ, ಎಂದು ? ಎಲ್ಲಾದರೂ ಅವಳಿಗೆ ಕೇಳಿಬಿಟ್ಟರೆ ಮನೆಯೊಳಗೆ ಮಳೆಗಾಲವಾದೀತು ಮತ್ತೆ ?"

ಪುರುಷೋತ್ತಮರಾಯರು ಎದ್ದು, ಪೇಟೆಗೆ ಹೊರಟರು. ಕಮಲಮ್ಮ ಅಡುಗೆ ಮನೆಯ ಕಡೆಗೆ ಸಾಗಿದರು. ಹೊರಗೆ ಕುಳಿತಿದ್ದ ದಾಸಿ, ಇವರ ಮಾತುಗಳನ್ನು ಕೂಲಂಕಶವಾಗಿ ಕೇಳಿದಳು. ಅವಳ ಕಣ್ಣು ಮುಗಿಲಾಯಿತು. ಯಾರಾದರೂ ನೋಡಿಯಾರೆಂಬ ಭಯದಿಂದ ಹಿತ್ತಲಿಗೆ ಓಡಿ ಹೋದಳು. ಆ ಸಂಜೆಯ ಪ್ರಶಾಂತ ವಾತಾವರಣದಲ್ಲಿ, ಬೀಸುತ್ತಿರುವ ಹೂಗಾಳಿಯಲ್ಲಿ ತಲೆದೂಗುತ್ತಿರುವ ಮರಗಳು ದಾಸಿಯು ಚೆನ್ನಾಗಿ ಕಣ್ಣೀರು ಸುರಿಸುವುದನ್ನು ನೋಡಿದವು.

\+ \+ \+ \+

ಕಮಲಮ್ಮ ಮದುವೆಯಾದ ಮೇಲೆ, ಏಳು ವರ್ಷಗಳಲ್ಲಿ ಏಳು ಬಾರಿ ಗರ್ಭಿಣಿಯಾದರು. ಆದರೆ ಏಳು ಬಾರಿಯೂ ಅಕಾಲದಲ್ಲೇ ಗರ್ಭವಿಳಿದು ಹೋದುದರಿಂದ, ಮುಂದೆ ಬಲವಾದ ನಿಶ್ಶಕ್ತಿಯುಂಟಾಯಿತು. ಆದುದರಿಂದ ಕೆಲಸ ಕಾರ್ಯಗಳಲ್ಲಿ ಸಹಾಯವಾಗಲೆಂದು, ಪುರುಷೋತ್ತಮರಾಯರು ಹುಡುಕಿ, ಹುಡುಕಿ, ಕೊನೆಗೆ ದಾಸಿಯನ್ನು ಕರೆದುಕೊಂಡು ಬಂದರು.

ದಾಸಿಗೆ ಇಪ್ಪತ್ತು ವರ್ಷ ವಯಸ್ಸು; ನೋಡಲು ಸುಂದರಿಯೂ ಹೌದು. ದನದ ಬಾಲದಂಥ ನೀಳವಾದ, ಕಪ್ಪಗಾದ ಜಡೆ; ದುಂಡಗಾದ ದೇಹ. ಸುಂದರವಾದ ನಡಿಗೆ; ಎಲ್ಲವೂ ಸುಂದರಿಗೆ ಒಪ್ಪುವಂತಾದ್ದೇ! ಆದರೆ, ಕುಂಕುಮದ ಅಭಾವವೊಂದು ಮಾತ್ರ ಮುಖವನ್ನು ಪ್ರತ್ಯೇಕಿಸಿಟ್ಟಂತೆ ಕಾಣುತ್ತಿತ್ತು.

ಅವಳು ವಿಧವೆಯೆಂದು ಗೊತ್ತಿಲ್ಲದ ಕಮಲಮ್ಮನಿಗೆ ಇದರಿಂದ ತುಂಬಾ ಆಶ್ಚರ್ಯ. ಒಂದು ದಿನ ಸಹಜವಾಗಿ ಕೇಳಿದಳು: " ನೀನು ಕುಂಕುಮವನ್ನೇಕೆ ಇಟ್ಟುಕೊಳ್ಳುವುದಿಲ್ಲ ? "

" ಅಯ್ಯೊ ! ಅದರ ಹೆಸರನ್ನೆತ್ತಬೇಡಿ. "

" ಅದೇನು ? ಕುಂಕುಮವೆಂಬುದು ಅಷ್ಟು ತುಚ್ಛವೇ ! "

ದಾಸಿ ನಿಟ್ಟುಸಿರು ಬಿಟ್ಟು, ಹೇಳಲಾರಂಭಿಸಿದಳು:

“ ಕುಂಕುಮ ! ಕುಂಕುಮವೆಂಬುದು ಸ್ತ್ರೀಗೆ ಎಷ್ಟು ಪುನೀತವಾದುದು! ಮಂಗಲಕರವಾದುದು ! ಕುಂಕುಮವನ್ನು ಬಿಟ್ಟರೆ ಸ್ತ್ರೀಗೆ ಬೇರೆ ಸೌಭಾಗ್ಯ ವಿಲ್ಲ! ಆ ಕುಂಕುಮವೇ ಸ್ತ್ರೀಗೆ ದೇವ ! ............ಇಷ್ಟೇ ಅಲ್ಲ; ಇನ್ನೂ ಅದೆಷ್ಟೋ ಭಾವನೆಗಳು ಕುಂಕುಮದ ಹೆಸರೆತ್ತಿದೊಡನೆಯೇ ನನ್ನ ಮನಸ್ಸಿನಲ್ಲಿ ಉದಿಸುತ್ತವೆ. ಆದರೆ.... ! ಆದರೆ! ವಿಧಿಯು ಹೇಗೆ ಕ್ರೂರವಾಗಿ, ಆ ಕುಂಕುಮದ ಮಹತ್ವವನ್ನು ನನಗೆ ಬೋಧಿಸಿತೆಂಬುದನ್ನು ಹೇಳಲಿ....!

“ ನಮ್ಮ ಮನೆಯಿದ್ದುದು ಮಂಗಳೂರಿನಲ್ಲಿ; ಚಿಕ್ಕಂದಿನಲ್ಲಿ ನನ್ನನ್ನು ಧರ್ಮಾರ್ಥವಾದ ಒಂದು ಮುನಿಸಿಪಲ್ ಶಾಲೆಗೆ ವಿದ್ಯಾರ್ಜನೆಗಾಗಿ ಹಾಕಿದರು. ಆಗ ನಗರವೆಲ್ಲವೂ ‘ ಫೆಶನಿ ’ನ ಸಮುದ್ರದಲ್ಲಿ ಮುಳುಗಿ ಹೋಗಿತ್ತು. ಆದರೆ ನನ್ನ ಹೆತ್ತವರು ಮಾತ್ರ ಸಂಪೂರ್ಣವಾಗಿ ಆ ಹಳೆ ಪದ್ಧತಿಯ ಕಟ್ಟುನಿಟ್ಟಾದ ಅನುಯಾಯಿಗಳಾಗಿದ್ದರು. ಸೂರ್ಯನು ಮೂಡುವ ಹೊತ್ತಿಗೂ, ಸರಿಯಾಗಿ ನಮ್ಮ ಮನೆದೇವರಿಗೆ ಪೂಜೆಯಾಗುತ್ತಿತ್ತು. ನನ್ನ ತಂದೆಯವರೆಂದೂ ತಮ್ಮ ಮುಂಡನ್ನು ಬೀದಿಯ ಧೂಳು ಗೂಡಿಸುವಂತೆ ಉಟ್ಟವರಲ್ಲ. ಯಾವಾಗಲೂ ಅದು ಅವರ ಮೊಳಕಾಲ ಮೇಲೆಯೇ. ಹಣೆಯೆಲ್ಲವೂ ಮುಚ್ಚುವಂತೆ ಮೂರು ನಾಮ ಅಜ್ಜನ ಕಾಲದ ಒಂದು ಹಳೆಯ ಕೋಟು. ಅದರ ಮೇಲೆ ಬಣ್ಣ ಮಾಸಿದ ಶಾಲು; ತಾಳೆಗರಿಯ ಒಂದು ಹಳೆ ಸತ್ತಿಗೆ— ಇದು ಅವರ ಕೆಲವು ವೇಷಭೂಷಣಗಳು. ಇವರು ಬೀದಿಯಲ್ಲಿ ಹೊರಟರೆ ಸಾಕು, ಮಕ್ಕಳೆಲ್ಲಾ ‘ಗುಮ್ಮ’ನೆಂದು ಹೆದರಿ, ಮನೆಯೊಳಗೆ ಅಡಗಿ ಬಿಡುತ್ತಿದ್ದವು. ಮತ್ತೆ ಕೆಲವರು ‘ ಭೇತಾಳ’ ಎನ್ನುತ್ತಿದ್ದರು. ಎಷ್ಟೋ ಬಾರಿ ನನಗೆ ಇದನ್ನು ಕೇಳಿ ಬೇಸಗವಾದುದುಂಟು. ತಂದೆಯವರೊಡನೆ ಹೋಗಲು ನಾಚಿಕೆಯಾದುದುಂಟು. ಆದರೆ ಅವರಿಗೆ ಒಮ್ಮೆಯಾದರೂ ಇದರಿಂದ ಮನನೊಂದುದಿಲ್ಲ. ಸುತ್ತಣ ಜನರ ‘ಬಿರುದು’ಗಳನ್ನು ಕೇಳಿ ಅವರು ನಕ್ಕು ಮುಂಬರಿಯುತ್ತಿದ್ದರು. ಅವರ ತಾಳ್ಮೆ !—ಪ್ರಾಯ; ಅದು ಭೂದೇವಿಯ ತಾಳ್ಮೆಗಿಂತಲೂ ಮಿಗಿಲಾಗಿರಬೇಕು.

ನನ್ನ ತಾಯಿ, ತಂದೆಗೆ ತಕ್ಕ ಹೆಂಡತಿ; ಅವಳು ದಿನಕ್ಕೊಂದು ಸೀರೆ ಉಟ್ಟುದನ್ನು ನಾನೆಂದೂ ಕಾಣಲಿಲ್ಲ. ಅವಳ ಕೈಯಲ್ಲಿ ಇನ್ನೂ ಆ ಕೆಂಪು

ಕಾಜಿನ ಬಳೆಗಳು, ಕೊರಳಲ್ಲಿ ನೂಲಿನಲ್ಲಿ ಪೋಣಿಸಿದ ಕರಿಮಣಿಯ ತಾಳಿ. ಎಲ್ಲಕ್ಕಿಂತಲೂ ಮಿಗಿಲಾಗಿ ಅವಳ ಆ ಅಗಲವಾದ ಹಣೆಯಲ್ಲಿ, ಕಮ್ಯೂನಿಷ್ಟರ ಪತಾಕೆಗಿಂತಲೂ ದೊಡ್ಡದಾದ ಕುಂಕುಮ! ಬೇರೆಯವರು ಅವಳನ್ನು 'ಭೂತ'ವೆಂದು ಕರೆಯುವದು ಹಾಗಿರಲಿ! ಎಷ್ಟೋ ಬಾರಿ ನಾನೇ ಅವಳನ್ನು 'ಭೂತ'ವೆಂದು ಗ್ರಹಿಸಿದ್ದೇನೆ! ತಾಯಿಯೆಂಬ ಮಮತೆಯಿಂದ ಮಾತ್ರ ಹಾಗೆ ಬಾಯಿಬಿಟ್ಟು ಹೇಳಲಿಲ್ಲ.

ನಾನು ಶಾಲೆಗೆ ಹೋಗತೊಡಗಿದೆ. ದಿನಂಪ್ರತಿಯೂ ಶಾಲೆಗೆ ಹೋಗುವಾಗ, ತಾಯಿ, ನನ್ನ ಚಿಕ್ಕ ಹಣೆಗಿಂತಲೂ ದೊಡ್ಡದಾದ ಕುಂಕುಮ ತಿಲಕವನ್ನು ಹಾಕಿ ಕಳುಹಿಸುತ್ತಿದ್ದಳು. ಇದರಿಂದ ಶಾಲೆಯಲ್ಲಿ ಎಲ್ಲ ಹುಡುಗಿಯರೂ ನನ್ನ ಲೇವಡಿ ಮಾಡುವುದಾಯಿತು. ಮಂಗಳೂರು 'ಫೇಶನ್'ನಲ್ಲಿ ಬಹಳ ಮುಂದುವರಿದ ನಗರ. ಆಗ ಹಣೆಯಲ್ಲಿ ಸೂಜಿ ಮನೆಯಷ್ಟು ದೊಡ್ಡದಾದ ಅಕ್ಷತೆಯನ್ನು ಧರಿಸಿಕೊಂಡು ಬರುವುದು ಫೇಶನಾಗಿತ್ತು. ಶಾಲೆಯಲ್ಲಿ ನಾನೊಬ್ಬಳೇ ಅಷ್ಟು ದೊಡ್ಡ ಕುಂಕುಮವನ್ನು ಧರಿಸಿಕೊಂಡು ಬರುವುದನ್ನು ನೋಡಿ ಎಲ್ಲರೂ ನನ್ನನ್ನು ಹಾಸ್ಯಮಾಡತೊಡಗಿದರು. ಈ ಹುಡುಗಿಯರ ಲೇವಡಿ, ನನ್ನಲ್ಲಿ ಕುಂಕುಮದ ಕಡೆಗೆ ವೈರಭಾವವನ್ನು ಬೆಳೆಸಿತು. ತಾಯಿಯೊಡನೆ, ಸಾವಿರ ಬಾರಿ, "ಈ ಹಾಳು ಕುಂಕುಮ ತಿಲಕಬೇಡ!" ಎಂದು ಹೇಳಿದರೂ ಅವಳು ಕೇಳಲಿಲ್ಲ. "ಏನು? ಕುಂಕಮ ಬೇಡ! ಹಾಗೆ ಹೇಳುವುದೂ ಒಂದು 'ಪಾಪ'ವೆಂದು ನಿನಗೆ ಗೊತ್ತಿಲ್ಲವೇ? ಹಾಸ್ಯ ಮಾಡುವವರೆಲ್ಲಾ ಮಾಡಲಿ! ನೀನದನ್ನು ಗಣಿಸಬೇಡ! ಕುಂಕುಮವೇ ಸ್ತ್ರೀಯರಿಗೆ ಮಂಗಳ ಸನ್ನೆ! ಕುಂಕುಮವೇ ಸ್ತ್ರೀಯರಿಗೆ ದೈವ!" ನಾನು ಎಷ್ಟು ಅತ್ತು ಕಾಡಿದರೂ ತಾಯಿಯ ಮನಸ್ಸು ಬೇರೆ ತಿರುಗಲಿಲ್ಲ. ಹುಡುಗಿಯರ ಲೇವಡಿ ಶಾಲೆಯಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಿತ್ತು. ಕೊನೆಕೊನೆಗೆ ನನಗೊಂದು ದಿವ್ಯಾಲೋಚನೆ ಹೊಳೆಯಿತು. ಮನೆಯಿಂದ ಹೊರಡುವಾಗ ದೊಡ್ಡ ತಿಲಕವನ್ನು ಹಾಕಿಕೊಂಡು ಹೋಗುತ್ತಿದ್ದೆ; ಆದರೆ ಶಾಲೆಗೆ ಹೋಗುವಾಗ ಬೋಳು ಹಣೆಯಿಂದ ಹೋಗುತಿದ್ದೆ. ದಾರಿಯಲ್ಲಿ ಆ ಕುಂಕುಮವನ್ನು ಅಳಿಸಿಬಿಡುತ್ತಿದ್ದೆ.

ನನಗೆ ಹದಿನಾಲ್ಕು ವರ್ಷ ಪ್ರಾಯವಾಗುವಾಗ, ನಾನು ಎಂಟನೇ ತರಗತಿಯನ್ನೂ ಪಾಸಾಗಿ ಮುಗಿಸಿದೆ. ಮುಂದಿನದು ಉನ್ನತ ಶಿಕ್ಷಣ. ಆದರೆ, ವೇತನ ತೆತ್ತು, ನನ್ನನ್ನು ಹೈಸ್ಕೂಲಿಗೆ ಕಳುಹಿಸಲು ತಂದೆ ಸಿದ್ಧರಿರಲಿಲ್ಲ. ಹೀಗಾಗಿ ನಾನು ಮನೆಯಲ್ಲಿ ಉಳಿತುಕೊಳ್ಳಬೇಕಾಯಿತು. ಮನೆಯಲ್ಲಿದ್ದರೂ, ಆ ಹಿಂದಿನ ಅಭ್ಯಾಸವು ನನ್ನನ್ನು ಬಿಟ್ಟುಹೋಗಲಿಲ್ಲ; ನನ್ನ ಹಣೆಯು ಯಾವಾಗಲೂ ಕುಂಕುಮವಿಲ್ಲದೆ ಇರುತ್ತಿತ್ತು ತಾಯಿ, ಎಷ್ಟೋ ಬಾರಿ ಬೈದು ನೋಡಿದರು. ಆದರೆ ಅದರಿಂದೇನೂ ಪರಿಣಾಮವಾಗಲಿಲ್ಲ. ನನಗೆ ಈಗಲೂ, ಚೆನ್ನಾಗಿ ನೆನಪಿದೆ! ಒಮ್ಮೆ ನನ್ನ ಹಣೆಯಲ್ಲಿ ಕುಂಕುಮವಿಲ್ಲದ್ದನ್ನು ಕಂಡು ತಾಯಿ ರೇಗಿ, ಕುಂಕುಮವಿಡುವ ಸ್ಥಳದಲ್ಲಿ ಚೆನ್ನಾಗಿ ಚಿವುಟಿದ್ದಳು. ಆಗ ಕುಂಕುಮದ ಬದಲು ರಕ್ತವೇ ಹರಿಯಿತು!

ನನಗೆ ಹದಿನೈದು ವರ್ಷ ಪ್ರಾಯವಾಯಿತು ಹಿಂದುಗಳಲ್ಲಿ, ಅವರಲ್ಲೂ ಬ್ರಾಹ್ಮಣರಲ್ಲಿ, ಹುಡುಗಿಯರಿಗೆ ಚಿಕ್ಕಂದಿನಲ್ಲಿ ಮದುವೆ ಮಾಡುವುದು ಒಂದು ಹಳೆಯ ಪದ್ಧತಿ. ಎಲ್ಲಾ ವಿಷಯಗಳಲ್ಲೂ, ಹಳೆಪದ್ಧತಿಯನ್ನನುಸರಿಸುವ ನನ್ನ ತಂದೆಯವರು, ಇದರಲ್ಲಿ ಮಾತ್ರ ತಪ್ಪಿಯಾರೇ ? ಅವರು ವರನನ್ನು ಅರಸತೊಡಗಿದರು. ಆದರೆ, ವರಜನರು ಮುತ್ತಿನಷ್ಟು ಅಮೂಲ್ಯವಾಗಿದ್ದರು ಕನ್ಯಾಪಿತೃಗಳಿಗೆ ಗುಡ್ಡದಂತೆ ಕಾಣುವ ಧನವು ಅವರಿಗೆ ಮರಳಿನಂತೆ ಕಾಣುತ್ತಿತ್ತು. ಆದರೂ, ಸ್ವಲ್ಪ ಸಮಯದಲ್ಲಿ, ಹೇಗೂ, ನನ್ನ ತಂದೆಯವರು ವರನೊಬ್ಬನನ್ನು ಸಂಪಾದಿಸಲು ಶಕ್ತರಾದರು.

ಮತ್ತೆ ಒಂದು ವಾರದೊಳಗಾಗಿ ವಧೂಪರೀಕ್ಷೆಗೂ ಅವರು ಚಿತ್ತೈಸಿದರು ನಾನು ಚೆನ್ನಾಗಿ ಸಿಂಗರಿಸಿಕೊಂಡು, ಅವರ ಮುಂದೆ ಹಾಜರಾದೆ. ಭಾವೀ ಪತಿಯ ಸುಂದರ ರೂಪವನ್ನು ಚೆನ್ನಾಗಿ ನೋಡಿದೆ. ಐದು ನಿಮಿಷಗಳಲ್ಲಿ ನನ್ನನ್ನು ಒಳಹೋಗಬಿಟ್ಟರು. "ಹುಡುಗಿ, ಚಿಂತಿಲ್ಲ; ಚೆನ್ನಾಗಿವೆ." ಎಂದು ಹೊರಗಿನಿಂದ ಹೇಳುವುದು ನನಗೆ ಕೇಳಿಸಿತು. ಅದು ನನ್ನ ಸ್ವಾಮಿಯ ಸ್ವರ, ನಾನು ಹಿಗ್ಗಿದೆ, ಕನ್ನಡಿಯಲ್ಲಿ ನನ್ನ ಪ್ರತಿಬಿಂಬವನ್ನು ನೋಡಿಕೊಂಡೆ, ಹಾ! ಅಲ್ಲಿ ಕುಂಕುಮವಿರಲಿಲ್ಲ. ಯಾವಾಗಲೂ ದೊಡ್ಡ ಕುಂಕುಮವನ್ನಿಟ್ಟುಕೊಂಡು, ಭೂತದಂತೆ ಕಾಣುತಿದ್ದ ನನ್ನನ್ನು ಯಾರೂ ಇದುತನಕ ಸುರೂಪಿಯೆಂದುದಿಲ್ಲ. ಪ್ರಾಯಃ ನಾನು ಕುಂಕುಮವನ್ನಿಟ್ಟು

ಕೊಳ್ಳದಿದ್ದುದರಿಂದಲೇ, ನನ್ನ ಸ್ವಾಮಿ ನನ್ನನ್ನು ಸುರೂಪಿ ಎಂದುದಿರಬೇಕು. ನನ್ನ ಸ್ವಾಮಿ ಕೂಡಾ, 'ಫೇಶನ'ನ್ನು ಮೆಚ್ಚುತ್ತಾರೆ ಎಂದು ತಿಳಿದು ತುಂಬಾ ಸಮಾಧಾನವಾಯಿತು.

ಅಂದಿನಿಂದ ಒಂದು ತಿಂಗಳೊಳಗಾಗಿ, ನನ್ನ ಮದುವೆ ಮಹಾ ವೈಭವದಿಂದ ನಡೆದುಹೋಯಿತು. ನಾನು ನನ್ನ ಪತಿ ಗೃಹಕ್ಕೆ ತೆರಳಿದೆ. ನನ್ನ ಸ್ವಾಮಿಯ ತಾಯಿ-ಮುದುಕಿ-ಗೆ ಹೆದರಿ, ಅವರ ಇದಿರಿನಲ್ಲಿ ಕುಂಕುಮವಿಟ್ಟು ಕೊಂಡೇ ಸುಳಿದಾಡುತ್ತಿದ್ದೆ. ಆದರೆ, ಸ್ವಾಮಿಯ ಬಳಿಗೆ ಹೋಗುವಾಗ ಅದನ್ನು ಒರಸಿ ಬಿಡುತ್ತಿದ್ದೆ. ಸ್ವಾಮಿ ಅದನ್ನು ಮೆಚ್ಚುತ್ತಾರೆಂದು ತಿಳಿದಿದ್ದೆ ಆದರೆ ನಾನು ನಿರಾಶೆ ಹೊಂದಬೇಕಾಯಿತು.

ಒಂದು ದಿನ, ನಾನು ಅವರ ಬಳಿ ಹೋದಾಗ, ಅವರು ಆಶ್ಚರ್ಯದಿಂದ ಕೇಳಿದರು: "ಏಕೆ, ನಿನ್ನ ಹಣೆಯಲ್ಲಿ ಕುಂಕುಮವಿಲ್ಲ ?"

"ಆ ಹೇಸಿ ಕುಂಕುಮವನ್ನಿಟ್ಟುಕೊಳ್ಳಲಿಕ್ಕೆ, ನಾನೇನೂ ಹಳೇಕಾಲದ ಗೊಡ್ಡು ಹೆಂಗಸಲ್ಲ." ಎಂದು ಒರಟಾಗಿ ಹೇಳಿದೆ.

"ಅದೇಕೆ ? ಕುಂಕುಮವನ್ನಿಟ್ಟುಕೊಳ್ಳದಿರಲಿಕ್ಕೆ ನೀನೇನು 'ಮುಂಡೆ' ಯೇ ?" ಎಂದು ನಕ್ಕು ಹೇಳಿದರು.

ಇದರಿಂದ ನನಗೆ ಬಹಳ ವೇದನೆಯಾಯಿತು. ನನ್ನ ಸ್ವಾಮಿಯ ಕಡೆಗೆ ನನಗಿದ್ದ ಅಭಿಮಾನವು ಕ್ಷಣದಲ್ಲಿ ನೊರೆಯಂತೆ ಮಾಯವಾಯಿತು. ಜೀವನದಲ್ಲೇ ಬೇಸರವುಂಟಾಯಿತು.

ಇದೇ ಸಮಯಕ್ಕೆ ನನ್ನ ಸ್ವಾಮಿಯು ಗುಮಾಸ್ತರಾಗಿದ್ದ 'ಬೇಂಕು' ದಿವಾಳಿಯಾಯಿತು. ಬೇರೆಲ್ಲಿಯೂ ಕೆಲಸ ಸಿಕ್ಕದೆ ನನ್ನ ಸ್ವಾಮಿ, ಯುದ್ಧದ ನಾವೆಪಡೆಯನ್ನು ಸೇರಿಕೊಂಡರು. ನನ್ನನ್ನು ಅಗಲಿ ಹೋಗುವಾಗ ಅವರ ಕಣ್ಣಿನಿಂದ ಕಂಬನಿ ಸುರಿಯಿತು. ಆದರೆ ನನ್ನ ಕಣ್ಣುಗಳು ಅದಕ್ಕೆ ಉತ್ತರ ಹೇಳಲಿಲ್ಲ. (ಅದಕ್ಕಾಗಿ ನಾನೀಗ ಪಶ್ಚಾತ್ತಾಪ ಪಡುತ್ತಿದ್ದೇನೆ!) ನನಗೆ ಸ್ವಾಮಿಯ ಮೇಲೆ, ಅಷ್ಟು ಬೇಸರ ಬಂದು ಹೋಗಿತ್ತು.

ನನ್ನ ಸ್ವಾಮಿ ಹೊರಟುಹೋದರು. ನಾನೂ, ನನ್ನ ನಿಸ್ಸಾರವಾದ ಜೀವನವನ್ನು ಕಳೆಯತೊಡಗಿದೆ. ಸಾಯುವುದಕ್ಕಾಗಿ ಬದುಕತೊಡಗಿದೆ.

ನನ್ನ ಸ್ವಾಮಿ ಹೋದ ಮೇಲೆ ನನಗೆ ಅವರಿಂದ ನಾಲ್ಕಾರು ಸುದೀರ್ಘವಾದ ಪ್ರೇಮ ಪತ್ರಗಳು ಬಂದವು. ಆದರೆ, ನಾನು ಅವುಗಳಿಗೆ ಉತ್ತರವನ್ನೇ ಬರೆಯಲಿಲ್ಲ. (ಪುನಃ ಪಶ್ಚಾತ್ತಾಪ ಪಡುತ್ತಿದ್ದೇನೆ!) ಆ ಮೇಲೆ ಅವರಿಂದ ಪತ್ರಗಳು, ಬರುವುದು ನಿಂತು ಹೋಯಿತು. ಬಹುಶಃ ಅವರಿಗೂ ಸಿಟ್ಟು ಬಂತೆಂದು ತೋರುತ್ತದೆ.

ನನ್ನ ಸ್ವಾಮಿ ಯುದ್ಧಕ್ಕೆ ಸೇರಿ, ಒಂದು ವರ್ಷವಾಯಿತು. ಈ ಒಂದು ವರ್ಷದಲ್ಲಿ, ಅವರು ಒಮ್ಮೆಯಾದರೂ ಹಿಂದಿರುಗಿ ಬರಲಿಲ್ಲ. ಅದರ ಬದಲಾಗಿ, ನನ್ನ ಮಾವನವರಿಗೆ—ಅವರ ತಂದೆಯವರಿಗೆ—ಒಂದು ಚಿಕ್ಕ ಕಾಗದ ಬಂತು. ಅದರಲ್ಲಿ, ಅವರಿಗೆ ಸೌಖ್ಯವಿಲ್ಲವೆಂದೂ, ರಜೆ ತೆಗೆದುಕೊಳ್ಳಲು ಸಾಧ್ಯವಿಲ್ಲದುದರಿಂದ, ಅನಿವಾರ್ಯವಾಗಿ ಅಲ್ಲೇ ಇದ್ದಾರೆಂದೂ ಬರೆದಿತ್ತು. ಇದರಿಂದ ಮನೆಯಲ್ಲಿ ಎಲ್ಲರೂ ದುಃಖಕ್ಕೀಡಾದರು. ಆದರೆ ನಾನು ಅದನ್ನು ಲೆಕ್ಕಿಸಲಿಲ್ಲ. ಕಾಯಿಲೆಯೇನು, ಮನುಷ್ಯರಿಗೆ ಬಾರದೆ, ಕಲ್ಲು ಮರಗಳಿಗೆ ಬಂದೀತೇ? ನಾನು ಹಾಗೆ ಆಲೋಚಿಸಿದೆ. ಜ್ವರವು ಹೆಚ್ಚಾಯಿತೆಂದೂ, ಕಡಿಮೆಯಾಯಿತೆಂದೂ, ನನ್ನ ಸ್ವಾಮಿಯವರಿಂದ ಆಗಾಗ ಪತ್ರಗಳು ಬರುತ್ತಲೇ ಇದ್ದುವು.

ಒಂದು ವಾರದ ಮೇಲೆ, ಒಂದು ದಿನ ನನ್ನ ಅಮ್ಮ, ನಮ್ಮ ಮನೆಗೆ ಬಂದಿದ್ದಳು. ಆ ದಿನ ಸಾಯಂಕಾಲ, ಕಾಫಿ ಕುಡಿದ ಮೇಲೆ, ನಾವು ಲ್ಯಾಟ್ ಹೌಸ್ ಹಿಲ್ಲಿಗೆ ತಿರುಗಾಡಲೆಂದು ಹೊರಟೆವು. ತೇರು ಬೀದಿಯಲ್ಲಿ, ಮಾರ್ಕೇಟಿನ ಬಳಿ ಬರುವಾಗ, ಒಬ್ಬಳು ಹೆಂಗಸು, ಹಳದಿ ವಸ್ತ್ರದ ಮೇಲೆ ಕುಂಕುಮವನ್ನಿಟ್ಟುಕೊಂಡು, "ಕುಂಕುಮ ಬೇಕೇ, ಅಮ್ಮಾ!" ಎಂದು ಕೇಳಿದಳು.

"ಬೇಡ!" ಎಂದೆ ನಾನು.

"ಛುಪ್! ಹಾಗೆ ಹೇಳಬೇಡ!" ಎಂದರು ತಾಯಿ.

"ಅದೇಕೆ?" ಎಂದೆ ನಾನು.

"ಸುಮ್ಮನೆ ಹುಚ್ಚುಹುಚ್ಚು ಪ್ರಶ್ನೆಗಳನ್ನು ಕೇಳಬೇಡ! ಯಾರಾದರೂ 'ಕುಂಕುಮಬೇಕೇ?' ಎಂದು ಕೇಳಿದರೆ, 'ಕುಂಕುಮ ಉಂಟು' ಎನ್ನಬೇಕು. 'ಬೇಡ' ಎಂದರೆ ಮುಂದೆಂದೂ ಕುಂಕುಮವನ್ನು ಇಟ್ಟುಕೊಳ್ಳದ ಹಾಗಾಗುತ್ತೆ!" ಎಂದು ತಾಯಿ ಹೇಳಿದಳು.

ನಾನು ಅವಳ ಮಾತಿನ ಅರ್ಥ ತಿಳಿಯದೆ, “ಒಮ್ಮೆ ಅದು ಬರಲಪ್ಪ!” ಎಂದು ಮನಸ್ಸಿನಲ್ಲೇ ದೇವರಿಗೆ ಸಾವಿರ ಬಾರಿ ಕೈಮುಗಿದೆ.

ಮರುದಿನ ಮಧ್ಯಾಹ್ನ ಹನ್ನೊಂದು ಗಂಟೆಗೆ, ನನ್ನ ಮಾವನವರ ವಿಳಾಸಕ್ಕೆ ಒಂದು ತಂತಿ ಬಂತು. ಅದು ಬಂದಾಗ ನಾನು ಒಳಕೋಣೆಯಲ್ಲಿದ್ದೆ. ಜಗಲಿಯಲ್ಲಿದ್ದವರೆಲ್ಲರೂ, ಅದನ್ನು ಓದಿ ಸ್ತಂಭೀಭೂತರಾದರು. ನಾನು ಹೊರಗೆ ಜಗಲಿಗೆ ಬಂದಾಗ, ಅಮ್ಮ, ಅಶ್ರುಪೂರಿತವಾದ ಕಣ್ಣುಗಳಿಂದ ನನ್ನ ಕಡೆಗೆ ನೋಡಿದಳು. ಒಂದು ಹನಿ ಕಣ್ಣೀರು, ಕೆನ್ನೆಯ ಮೇಲೆ ಇಳಿಯಿತು.

ನಾನು ಅವಳು ಸಿಟ್ಟಿಗೇಳಬಹುದೆಂದು ಬೆದರಿ, “ಓಹೋ! ನಾನು ಕುಂಕುಮವನ್ನಿಟ್ಟುಕೊಳ್ಳಲೇ ಇಲ್ಲ!” ಎಂದು ಒಳಹೋಗ ನೋಡಿದೆ.

“ಅಯ್ಯೋ! ಬೇಡ! ಬೇಡ! ಇನ್ನು ನಿನಗಾ ಭಾಗ್ಯವಿಲ್ಲ! ಇನ್ನೆಂದೂ ಯಾರೂ ನಿನ್ನನ್ನು ಕುಂಕುಮವಿಟ್ಟುಕೊಳ್ಳಬೇಕೆಂದು ಹೇಳಲಾರರು ಕುಂಕುಮವನ್ನಿಟ್ಟುಕೊಳ್ಳದೆ ಇರಬೇಕೆಂಬ ನಿನ್ನ ಆ ಇಚ್ಛೆ, ಇಂದಿಗೆ ಸಂಪೂರ್ಣವಾಗಿ ಈಡೇರಿತು!” ಹೀಗೆ ಹೇಳಿ ಅಮ್ಮ ಗಟ್ಟಿಯಾಗಿ ಅಳಲು ಪ್ರಾರಂಭಿಸಿದಳು.

§ § § §

ಧಾರಾಕಾರವಾಗಿ ಕಣ್ಣೀರ ಮಳೆಗರೆಯುತ್ತಾ, ದಾಸಿ ತನ್ನ ಕರುಣ ಕಥೆಯನ್ನು ಮುಗಿಸಿದಳು.

---

# ಭೂತೋಚ್ಚಾಟನೆ

ಬೆಳಿಗ್ಗೆ ಸುಮಾರು ಎಂಟು ತಾಸಿನ ಸಮಯ; ಪೋಸ್ಟ್‌ಮ್ಯಾನನ ಸವಾರಿ ಚಿತ್ತೈಸಿತು. ಕೃಷ್ಣ ಹೊರಗೆ ಛಾವಡಿಯಲ್ಲಿದ್ದ.

“ ಇದು ಪೂರ್ಣಿಮಾ ಮಂದಿರವೇ ? ”

‘ ಪೂರ್ಣಿಮಾ ಮಂದಿರ’ವೆಂದು ಹೊರಗೆ ಗೇಟಿನಲ್ಲಿ ಕೆತ್ತಿಸಿದ್ದರೂ, ಹಾಗೆ ಪ್ರಶ್ನಿಸುವುದು ಪೋಸ್ಟ್‌ಮ್ಯಾನ್‌ಗಳ ಪದ್ಧತಿ.

“ ಹೌದು. ”

ಪೋಷ್ಟ್‌ಮ್ಯಾನ್ ಒಂದು ಕವರನ್ನಿತ್ತು ಹೊರಟುಹೋದ. ಕವರನೊಡೆದು ಒಳಗಿನ ಪತ್ರವನ್ನೋದಿದಾಗ, ಸಂತೋಷವೂ ಆಶ್ಚರ್ಯವೂ ಉಂಟಾಯಿತು. ಪತ್ರವು—ಬೆಂಗಳೂರಿನಿಂದ—ಅವನ ಸಹೋದರಿಯಿಂದ ಬಂದಿತ್ತು.

ಬೆಂಗಳೂರು
೩—೮—,೪೭

ಚಿ|| ಕೃಷ್ಣನಿಗೆ,

ಆಶೀರ್ವಾದಗಳು. ನೀನು ಕಾಸರಗೋಡಿನಿಂದ ಹೊರಟು ಎಲ್ಲಿ ಹೋದೆಯೆಂಬ ವಿಚಾರವನ್ನು ತಿಳಿಯದೆ ಇಷ್ಟು ದಿನವೂ ಚಡಪಡಿಸುತ್ತಿದ್ದೆ. ನಿನ್ನ ಭಾವನವರಿಗೆ ನಂಜನಗೂಡಿನಿಂದ ವರ್ಗವಾಗಿ, ಇಲ್ಲಿ ನೇಮುಕವಾಗಿ ನಾಲ್ಕಾರು ವರ್ಷವಾಯಿತು ನೀನು ಮಂಗಳೂರಿನಲ್ಲಿರುವೆಯೆಂದು ಮೊನ್ನೆ ತಾನೇ ತಿಳಿಯಿತು. ಈಗ ನಾನು ಬಹಳ ಸಂಕಷ್ಟದಲ್ಲಿದ್ದೇನೆ. ಎರಡು ತಿಂಗಳಾಯಿತು; ನಿನ್ನ ಭಾವನವರಿಗೆ ದೆವ್ವ ಹಿಡಿದಿದೆ. ನೀನು ಕ್ಷಿಪ್ರದಲ್ಲೇ ಬಂದು ಇದಕ್ಕೆ ಮದ್ದರೆಯಬೇಕು ಇಲ್ಲವಾದರೆ ನಾನು ವಿಷವನ್ನಾಗಲೀ, ಭಾವಿಯನ್ನಾಗಲೀ, ನೇಣನ್ನಾಗಲೀ ಆಶ್ರಯಿಸಬೇಕಾದೀತು. ಆಶೀರ್ವಾದಗಳು

ಲಲಿತಾ.

ಕಾಗದವನ್ನೋದಿ ಕೃಷ್ಣನು ಕ್ಷಣಕಾಲ ಯೋಚಿಸುತ್ತಾ ಕುಳಿತು ಕೊಂಡನು.

ಲಲಿತೆಗೆ ಮದುವೆಯಾದ ಎರಡು ವರ್ಷಗಳಲ್ಲಿ ಅವಳ ತಂದೆ ತಾಯಿ ಗಳಿಬ್ಬರೂ ಸ್ವರ್ಗಸ್ಥರಾದರು. ಆಗ ಕೃಷ್ಣನು ಏಕಾಂಗಿಯಾದ. ಲಲಿತೆಯ ಗಂಡ ಮಾಧವರಾಯರು ಆಗ ನಂಜನಗೂಡಿನಲ್ಲಿ ಒಂದು ಕಂಪೆನಿಯ 'ಎಕ್ಟಿಂಗ್ ಮೆನೇಜರ' ರಾಗಿದ್ದರು. ಅವರು ಮೈದುನನನ್ನು ಔಪಚಾರಿಕ ವಾಗಿ ತಮ್ಮಲ್ಲಿಗೆ, 'ಬಾ!' ಎಂದೇನೋ ಕರೆದರು. ಆದರೆ, ಅದು 'ಗೋಳಿನ ಬಾಳು' ಎಂಬುದನ್ನು ತಿಳಿದ ಕೃಷ್ಣನು ನಿರಾಕರಿಸಿದನು. ಆದರೆ ಕೂಳಿನ ಹಾದಿಯನ್ನು ಹುಡುಕವುದು ಬಹು ಪ್ರಯಾಸವಾಯಿತು. ಇದ್ದ ಅಲ್ಪ ಸ್ವಲ್ಪ ಸೊತ್ತು ಸಾಲಗಾರರ ಕಂಠದಲ್ಲಿ ಜೀರ್ಣವಾಗಿ ಹೋಯಿತು. ಸಾಲ ದುದಕ್ಕೆ ವಿದ್ಯೆಯೂ ಅಪೂರ್ಣವಾಗಿತ್ತು. ಕಾಸರಗೋಡಿನಿಂದ ಪರದೇಶಿಯಾಗಿ ಉಡುಪಿಗೆ ಬಂದ ಅಲ್ಲಿಯೂ ಮುಂದಿನ ಹಾದಿ ಕಾಣಲಿಲ್ಲ. ಹೋಟಲಿನ 'ಮಾಣಿ'ಯ ಕೆಲಸ ಕೂಡಾ ಖಾಲಿಯಿರಲಿಲ್ಲ. ಮಂಗಳೂರಿಗೆ ಬಂದ. ಎರಡು ತಿಂಗಳ ಕಾಲದ ಸತತ ಪ್ರಯತ್ನದಿಂದ, 'ದುಂದುಭಿ' ಪತ್ರಿಕಾಲ ಯದಲ್ಲಿ ಹೇಗೂ ಒಂದು ಸ್ಥಾನದೊರೆಯಿತು. ಇಷ್ಟಾಗ ಬೇಕಾದರೆ ಆರು ವರ್ಷವಾಯಿತು. ಈಗ ಎಂಟುವರುಷವಾಗಿದೆ. ಈ ಎರಡು ವರುಷಗಳ ಅವಧಿಯಲ್ಲಿ ಕೃಷ್ಣ ಬಹು ಮೇಲ್ಮಟ್ಟಕ್ಕೇರಿದ್ದ. ತಿಂಗಳಿಗೆ ಇನ್ನೂರು ರೂಪಾಯಿಗಳಷ್ಟು ವರಮಾನವಿತ್ತು. ಅಲ್ಲದೆ, ಬೇರೆಯವರ ಲೇಖನಗಳನ್ನು ಮೂಲೆಗೊತ್ತಿ, ತನ್ನ ಲೇಖನಗಳನ್ನೇ ಆಗಾಗ ಪತ್ರಿಕೆಯಲ್ಲಿ ಪ್ರಕಟ ಪಡಿಸಿ ದುದರಿಂದ ಸ್ವಲ್ಪ ಖ್ಯಾತಿಯೂ ಬಂದಿತ್ತು.

ಕೃಷ್ಣನು ಮಂಗಳೂರಿಗೆ ಬಂದೊಡನೆಯೇ ನಂಜನಗೂಡಿಗೆ ಪತ್ರ ಬರೆದಿದ್ದ. ಆಗ ತಾನೇ ಮಾಧವರಾಯರಿಗೆ ಬೆಂಗಳೂರಿಗೆ ವರ್ಗವಾಗಿತ್ತು. ಅಧಿಕಾರಿಗಳು ಪತ್ರವನ್ನು ಬೆಂಗಳೂರಿಗೆ ಕಳುಹಿಸುವ ಪ್ರಯಾಸ ವಹಿಸಲಿಲ್ಲ. ಹೀಗಾಗಿ ಕಾಗದವು ಮೂಲೆ ಪಾಲಾಯಿತು. ಲಲಿತೆ ಕೃಷ್ಣನಿಗೆ ಕಾಸರ ಗೋಡಿನ ವಿಳಾಸಕ್ಕೆ ಬರೆದ ಕಾಗದವೂ ವಿಳಾಸದಾರರಿಲ್ಲದೆ ಹಿಂದಿರುಗಿತು. ಎಂಟು ವರ್ಷಗಳ ಕಾಲ ಹೀಗೆ ಸಹೋದರ ಸಹೋದರಿಯರು ಅಜ್ಞಾತವಾಸ ದಲ್ಲಿದ್ದರು.

ಅಕ್ಕನ ಪತ್ರವನ್ನೋದಿ ಕೃಷ್ಣನಿಗೆ ಯೋಚನೆ ಹಿಡಿಯಿತು. ಭಾವನಿಗೆ ಪ್ರೇತ ಹಿಡಿಯಲು ಕಾರಣವೇನು ? ಅವರ ಸಮ್ಬಂಧಿಕರು ಯಾರಾದರೂ ಕಾಲವಾಗಿದ್ದಾರೆಯೇ ? ಅವರಿಗೆ ಇವರ ಮೇಲೆ ವೈರವಿತ್ತೇ ? ಇವರು ಅವರ ಕರ್ಮಗಳನ್ನು ಸಾಂಗವಾಗಿ ನೆರವೇರಿಸಗೊಡಲಿಲ್ಲವೇ ?—ಇತ್ಯಾದಿ ಪರಿಭಾವನೆಗಳು. "ಹೇಗೂ ಇರಲಿ; ಇಂದೇ ಹೊರಡಬೇಕು. ಆ ಭೂತೋಚ್ಚಾಟನೆಯನ್ನು ಮಾಡಿಬಿಡಬೇಕು." ಎಂಬ ಇತ್ಯರ್ಥಕ್ಕೆ ಬಂದನು. ಆಗ, ಕಾಫಿ ಬಂದು ಮೇಜಿನ ಮೇಲೆ ಕುಳಿತಿತ್ತು. ಅದನ್ನು ಕುಡಿದು ರಜೆ ಅರ್ಜಿಯನ್ನು ಬರೆದು ಉಡುಪು ಧರಿಸಿ ಆಫೀಸಿಗೆ ಹೊರಟನು.

ಅಂದೇ ಒಂಭತ್ತು ಗಂಟೆಗೆ ಕೃಷ್ಣನು ಮೈಸೂರಿಗೆ, ಬಸ್ಸನ್ನು ಹತ್ತಿದನು. ಬಸ್ಸು ಬರುವಾಗ ಗಂಟೆ ಹತ್ತಾಗಿದ್ದರೂ ಬಸ್ಸಿನ ನಿಯಮಿತ ವೇಳೆ ಒಂಭತ್ತಾಗಿತ್ತು. ಬಸ್ಸಿನಲ್ಲಿ ಆ ದಿನ ಪಯಣಿಗರ ಗಲಭೆಯೇನೂ ಇರಲಿಲ್ಲ. ಎಲ್ಲರೂ ವಿರಾಮವಾಗಿ, ಉಲ್ಲಾಸವಾಗಿ ಹರಟೆಕೊಚ್ಚುತ್ತಿದ್ದರು, ಇದ್ದವರು ಹನ್ನೆರಡು ಮಂದಿಯಾದುದರಿಂದ. ಕೃಷ್ಣನು ಮೂಕನಾಗಿಯೇ ಆಲೋಚಿಸುತ್ತಾ ಹಲವಾರು ಸಿಗರೇಟುಗಳನ್ನು ಸುಟ್ಟು ಭಸ್ಮ ಮಾಡಿದನು. ಆ ದಿನ ರಾತ್ರಿ 'ಮೈಸೂರು ಕೆಫೆ'ಯಲ್ಲಿ ಇಳಿದುಕೊಂಡುದಾಯಿತು. ಮರುದಿನ ಬೆಳಿಗ್ಗೆ ಬೆಂಗಳೂರಿಗೆ ರೈಲು ಹತ್ತಿದನು. ವಿಶ್ವೇಶ್ವರಪುರದಲ್ಲಿ ಅಕ್ಕನ ಮನೆಯ ಮುಂದೆ ಜಟಕಾ ಗಾಡಿಯಿಂದಿಳಿದಾಗ, ಭಾವನು ಆಫೀಸಿಗೆ ಹೋಗಿದ್ದ. ಅಕ್ಕನೇ ಸುಸ್ವಾಗತವನ್ನಿತ್ತಳು ಕಾಫಿ, ಫಲಾಹಾರಗಳ ಸೇವನೆಯೂ ಆಯಿತು. ಆಗ ಹೆಚ್ಚು ಮಾತೇನೂ ನಡೆಯಲಿಲ್ಲ. ಬಹಳ ಪರಿಶ್ರಮವಾಗಿದ್ದುದರಿಂದ ಕೃಷ್ಣನು ಆರಾಮಾಸನದಲ್ಲಿ ಒರಗಿ ನಿದ್ದೆಹೋದನು.

ಎಚ್ಚರವಾದಾಗ ಬೂಟ್ಸಿನ ಶಬ್ದ ಮಾಡುತ್ತಾ ಮನೆ ಮೆಟ್ಟಲು ಹತ್ತುತ್ತಿದ್ದಾರೆ. ಸಿಗರೇಟಿನ ಗಂಧ 'ಗುಮ್ಮೆ'ಂದು ಬರುತ್ತಿದೆ. ಕೃಷ್ಣನನ್ನು ನೋಡಿದೊಡನೆ ರಾಯರು ತಮಗೆ ಸಹಜವಾದ ರಾವಣ ಧ್ವನಿಯಿಂದ ಮಾತಾಡಿ ಸಂತೋಷವನ್ನು ಪ್ರದರ್ಶಿಸಿದರು. ಮೈದನನ ಕಾರ್ಯಕಲಾಪಗಳ ಕುರಿತು ಪ್ರಶ್ನಿಸಿ ತಿಳಿದುಕೊಂಡರು. ಆಗ ಲಲಿತ ಭೋಜನಕ್ಕೆ ಕರೆಯಬಂದಳು.

ಊಟವು ಸಮಾರಾಧನೆಯಾಗಿತ್ತು. ಅಪರೂಪವಾಗಿ ಬಂದ ತಮ್ಮನಿಗೆ ಲಲಿತ ವೈಭವದ ಔತಣವನ್ನೇರ್ಪಡಿಸಿದ್ದಳು. ಊಟ ಮುಗಿದು ಭಾವ ಮೈದುನರಿಬ್ಬರೂ ಛಾವಡಿಗೆ ಬಂದರು. ಸಿಗರೇಟು ಭಸ್ಮವಾಗುವವರೆಗೂ ಸಲ್ಲಾಪ ನಡೆಯಿತು.

"ಅವಸರವೇನೂ ಇಲ್ಲವಷ್ಟೆ! ನಾಲ್ಕು ದಿನ ಇದ್ದು ಹೋಗಬಹುದು. ಸಂಜೆ ಇಬ್ಬರೂ ಥೇಟರಿಗೆ ಬನ್ನಿ. ನಾನೂ ಆಫೀಸಿನಿಂದ ಟೈಮಿಗೆ ಸರಿಯಾಗಿ ಬರುತ್ತೇನೆ. ಒಂದು 'ಶೋ' ನೋಡಿಬಿಡೋಣ" ಎಂದು ರಾಯರು ಆಫೀಸಿಗೆ ಹೊರಡಲು ಸಿದ್ಧರಾಗಿ ಹೇಳಿದರು.

ಆಗ ಹೊರಗೆಬಂದ ಲಲಿತೆ, "ಇಲ್ಲ, ನಾವಿಂದು ಬರುವುದಿಲ್ಲ. ಕೃಷ್ಣನಿಗೆ ತುಂಬಾ ಆಯಾಸ." ಎಂದಳು.

"ಹಾಗಾದರೆ, ಸರಿ; ನಾನೊಬ್ಬನೇ ನೋಡಿಬಿಡುತ್ತೇನೆ. ರಾತ್ರಿ ನನಗೋಸ್ಕರ ಕಾಯಬೇಡಿ. ಬಂದರೂ ಬಂದೆ, ಆಫೀಸಿನಲ್ಲೇ ಮಲಗಿದರೂ ಮಲಗಿದೆ." ಎಂದು ರಾಯರು ಹೊರಟೇಬಿಟ್ಟರು.

ಲಲಿತೆ ನಿಟ್ಟುಸಿರುಬಿಟ್ಟಳು.

"ಅಕ್ಕ!" ಎಂದ ಕೃಷ್ಣ.

"ಏನು?"

"ಭಾವನವರನ್ನು ನೋಡಿದೆನಲ್ಲಾ?"

".... .... ...."

"ನೀನು ಹೇಳಿದ ಲಕ್ಷಣವೊಂದೂ ತೋರಲಿಲ್ಲ."

".... .... ...."

"ನಿನಗೇನಾದರೂ ಹೊಡೆಯುತ್ತಾರೆಯೇ?"

"ಹಾಗೇನೂ ಇಲ್ಲ!"

"ಹಾಗಾದರೆ ಸುಳ್ಳೇ ಬರೆದೆಯೇನು?"

"ಏಕೆ! ರಾತ್ರಿ ಬರುವುದಿಲ್ಲವೆಂದು ಅವರು ಹೇಳಿದುದನ್ನು ಕೇಳಲಿಲ್ಲವೇ?"

"ಕೇಳಿದೆ!"

"ಬಹುಶಃ ನಿನಗೆ ಈ ಭೂತದ ಅರಿವಾಗಲಿಲ್ಲವೋ ಏನೋ? ಹಾಗಾದರೆ ಕೇಳು." ಎಂದು ಲಲಿತೆ ಏನೇನೋ ಹೇಳಿದಳು.

ಆ ಊರಲ್ಲಿ ಒಬ್ಬಳು ವೇಶ್ಯೆ; ವೇಶ್ಯೆಯೆಂದರೇನು, ಒಂದು ವಿಚಿತ್ರ ವಸ್ತುವಲ್ಲ, ದೊಡ್ಡ ದೊಡ್ಡ ನಗರಗಳಲ್ಲಿ ಮನೆಗೊಬ್ಬಳಂತೆ ವೇಶ್ಯೆಯಿರುವುದು ಸಹಜ; ಆದರೆ ಈ ವೇಶ್ಯೆ ಹಾಗಲ್ಲ. ವಸಂತ ಕಾಲದ ಹೂವಿನ ಹಾಗೆ. ಯಾವಾಗ ನೋಡಿದರೂ ತುಂಬಿಗಳಿಂದ ಬಿಡುಗಡೆಯೇ ಇಲ್ಲ. ಅವಳ ಹೆಸರು ಅಪ್ಸರೆಯಂತೆ. ರೂಪಕ್ಕೆ ತಕ್ಕ ಹೆಸರು, ಅನ್ವರ್ಥ ನಾಮ ಎಂದು ಆ ಊರ ವೇಶ್ಯಾಸಂಗಿಗಳಲ್ಲದವರೂ ಒಪ್ಪಿಕೊಂಡಿದ್ದಾರೆ.

ಮಾಧವರಾಯರು ಬೆಂಗಳೂರಿಗೆ ಬಂದ ಮೊದಲಲ್ಲಿ ಈ ಅವಾಂತರವೇನೂ ಇರಲಿಲ್ಲ: ಅಥವಾ, ಲಲಿತೆಗೆ ಸಂಶಯವುಂಟಾಗಲಿಲ್ಲವೋ ಏನೋ? ಆದರೆ, ದಿನಗಳು ಕಳೆದಂತೆ ಹೊರಗಿನ ಒಂದೊಂದು ಮಾತಿನಿಂದ ಲಲಿತೆಗೆ ಸಂಶಯ ಬರತೊಡಗಿತು. ಒಂದು ದಿನ ಲಲಿತೆಯ ಸ್ನೇಹಿತೆಯೊಬ್ಬಳು ವಿಷಯವನ್ನು ಸ್ಪಷ್ಟವಾಗಿ ತಿಳಿಸಿದಳು; ತಾನು, ಕಣ್ಮುಟ್ಟ ಕಂಡಿದ್ದೇನೆ ಎಂದಳು ಸಾಲದುದಕ್ಕೆ ಇದೇಸಮಯ ರಾಯರು ದಿನಂಪ್ರತಿಯೂ ರಾತ್ರಿ ಹತ್ತು ಗಂಟೆಯ ಮೇಲೆ, 'ಕಂಪೆನಿ ಗಾರ್ಡ್'ಗೆಂತ ಹೋಗತೊಡಗಿದ್ದರು. ಒಂದು ದಿನ ಲಲಿತೆ ಪರಿಕಿಸುವ ಆಸೆಯಿಂದ ರಾಯರನ್ನನುಸರಿಸಿ ಹೊರಟಳು ಆದರೆ ಖೇದಕ್ರೋಧಗಳಿಂದ ಹಿಂದಿರುಗಬೇಕಾಯಿತು. ರಾಯರ ಕುರಿತು ಊರಲ್ಲಿ ಹಬ್ಬಿದ ವಾರ್ತೆ ದಿಟವಾಗಿತ್ತು.

ಅಕ್ಕನ 'ಭೂತ'ವನ್ನು ಕೇಳಿ ಕೃಷ್ಣ ಗೊಳ್ಳೆಂದು ನಕ್ಕುಬಿಟ್ಟನು ಲಲಿತೆ ಹೇಳಿದಳು: "ಏಕೆ, ನಗುತ್ತೀ ಕೃಷ್ಣ? ನಿನಗೇನೋ ನಗುಬರಬಹುದು. ಆದರೆ ಅದರ ಸಂಕಟ ನನಗೊಬ್ಬಳಿಗೇ ಗೊತ್ತು. ನಂಜನಗೂಡಿನಲ್ಲಿ ಸುಖವಾಗಿದ್ದೆವು. ಆದರೆ ಹಾಳಾದ ಬೆಂಗಳೂರಿಗೆ ಎಂದು ಬಂದೆವೋ, ಅಂದಿನಿಂದಲೇ ಪ್ರಾರಂಭವಾಯಿತು ಈ ಶನಿಕಾಟ."

ಅಕ್ಕನ ದುಃಖದ ಛಾಯೆ ತಮ್ಮನ ಮುಖದ ಮೇಲೂ ಪಸರಿಸಿತು: "ನಾನೇನು ಮಾಡಬೇಕೆಂದು ಹೇಳುತ್ತಿ ಅಕ್ಕ!"

"ನೀನು ಈಗ ಆ ವೇಶ್ಯೆಯ ಮನೆಗೆ ಹೋಗಬೇಕು. ಭಾವನು ಆ ಮನೆಯನ್ನು ಪ್ರವೇಶಿಸುವುದನ್ನು ತಪ್ಪಿಸಬೇಕು. ಹೇಗಾದರೂ ಮಾಡಿ ಅವಳನ್ನು ಈ ಊರು ಬಿಟ್ಟು ಹೋಗುವಂತೆ ಮಾಡಬೇಕು." ಎಂದು ಒಂದು ಮಹಾಕಾರ್ಯವನ್ನು ಕೃಷ್ಣನಿಗೊಪ್ಪಿಸಿದಳು.

ಕೃಷ್ಣನಿಗೆ ತನ್ನ ಕಾರ್ಯದ ಭಾರವು ಗೊತ್ತಾಯಿತು. ಆದರೆ ನಿಷೇದಾರ್ಥಕವಾಗಿ ಉತ್ತರಗೊಡಲಾರದೆ, ಕುಗ್ಗಿದ ಸ್ವರದಿಂದ, "ಎಲ್ಲಿ, ಆ ವೇಶ್ಯೆಯ ಮನೆ?" ಎಂದು ಕೇಳಿದನು.

"ಇದೇ ಬೀದಿಯಲ್ಲಿ ಒಂದೂಕಾಲ ಮೈಲು ದೂರದಲ್ಲಿ ಒಂದು ಮಾವಿನ ತೋಪಿದೆ ಅದರ ಬದಿಯಲ್ಲೇ ಒಂದು ಚರಂಡಿಯಿದೆ. ಅದಕ್ಕೆ ಮುಖ ಮಾಡಿಕೊಂಡಿರುವ ಮನೆಯೇ ಇವಳದು." ಎಂದಳು.

ಹಗಲು ಕಳೆದು ಕತ್ತಲು ಕಾಲಿಟ್ಟಿತು. ಗೃಹಕೃತ್ಯಗಳನ್ನೆಲ್ಲಾ ಮುಗಿಸಿಕೊಂಡು ಅಕ್ಕನೂ ತಮ್ಮನೂ ಮಲಗಿಕೊಂಡರು.

ಹತ್ತು ಗಂಟೆಗೆ ಸರಿಯಾಗಿ ಲಲಿತೆ ಎದ್ದು, ಕೃಷ್ಣನನ್ನು ಎಬ್ಬಿಸಿದಳು. ಕೃಷ್ಣನು ಉಡುಪುಗಳನ್ನು ಧರಿಸಿಕೊಂಡು ಬೀದಿಗಿಳಿದ. ಲಲಿತೆ ಮನೆಯ ಬಾಗಿಲನ್ನು ಮುಚ್ಚಿಕೊಂಡಳು. ಕೃಷ್ಣನು ಮುಂದುವರಿದ. ಮನಸ್ಸು ಮುಗಿಲುಗಳಿಂದ ಕವಿದ ಆಕಾಶದಂತಾಗಿತ್ತು. ತಾನು ಹೊತ್ತುಕೊಂಡ ಭೀಭತ್ಸಕಾರ್ಯವನ್ನು ನೆನೆದು ಒಮ್ಮೆ ನಡುಗಿದನು. ಆಲೋಚನೆಯಿಂದ ನಡಿಗೆ ನಿಧಾನವಾಗುವುದು; ಮತ್ತೆ ಚುರುಕಾಗುವುದು. ಹೀಗೆ ಡೋಲಾಯಮಾನದಿಂದ ತೋಪನ್ನು ತಲುಪಿದಾಗ ಗಂಟೆ ಹನ್ನೊಂದಾಗಿತ್ತು. ಇಲೆಕ್ಟ್ರಿಕ್ ದೀಪಗಳಿಂದ ರಾರಾಜಿಸುತ್ತಿದ್ದ ಮನೆಯ ತೆರೆದ ಬಾಗಿಲಿನಿಂದ ವೀಣಾಗಾನ ಲಹರಿಯು ತೇಲಿಬರುತ್ತಿತ್ತು. ಕೃಷ್ಣನ ಹಣೆಯಲ್ಲಿ ಸ್ವೇದಬಿಂದುಗಳು ಮೂಡಿಕೊಂಡವು. ಆದರೂ ಧೈರ್ಯದಿಂದ ಒಳಹೊಕ್ಕನು.

ಒಳಗೆ ಯುವತಿಯು ವೀಣಾನಾದದಲ್ಲಿ ತನ್ಮಯಳಾಗಿದ್ದಳು. ನವರಸದಿಂದ ಮನಮೋಹಕವಾಗಿ ಗಾನ ಲೋಕವನ್ನೇ ಪ್ರದರ್ಶಿಸುವಂತಿತ್ತು ಆ ನಾದ. ಹಸಿದವನಿಗೆ ಷಡ್ರಸೋಪೇತ ಭೋಜನವನ್ನುಣಿಸುವ ಹಾಗಿತ್ತು ಗಾನತರಂಗ. ಯುವತಿಯು ಯುವಕನನ್ನು ನೋಡಲಿಲ್ಲ. ಕೃಷ್ಣನು ಕೋಣೆಯ ವೈಭವವನ್ನು ಕ್ಷಣಕಾಲ ಕಂದೆರೆದು ನೋಡಿದನು. ಮತ್ತೆ ಕೆಮ್ಮಿದನು.

ಥಟ್ಟನೆ ಅಪ್ಸರೆಯ ಗಾಯನವು ನಿಂತುಹೋಯಿತು. ಕಣ್ಣೆತ್ತಿ ಯುವಕನನ್ನು ನೋಡಿ ನಗುನಗುತ್ತಾ, "ಏನು, ನಿಂತೇ ಇರುವಿರಲ್ಲ?" ಎಂದಳು.

ಕೃಷ್ಣನೂ ತತ್ತರಿಸುತ್ತಾ ಮುಂದಕ್ಕೆ ಕಾಲಿಟ್ಟನು, ದೀಪದ ಬೆಳಕಿನಲ್ಲಿ ಯುವಕನ ಗುರುತು ತಿಳಿದು ಅಪ್ಸರೆ ಕೂಗಿದಳು: 'ಕೃಷ್ಣರಾವ್' ಕೃಷ್ಣನೂ ಅಪ್ಸರೆಯನ್ನುದ್ದೇಶಿ "ಎಂದಿನಿಂದ ನೀನು ಅಪ್ಸರೆಯಾದೆ, ರತ್ನಾ ?" ಎಂದು ಕೇಳಿದನು.

"ಬೆಂಗಳೂರಿಗೆ ಬಂದಂದಿನಿಂದ !" ಎಂದಾಕೆ ನಕ್ಕು ಹೇಳಿದಳು.

ಕೂಡಲೇ ಫೌಲ್ ಬಿರಿಯಾಣಿಗೆ ಆರ್ಡರ್ ಹೋಯಿತು. ಓವಲ್ಟಿನ್ ಸಿದ್ಧವಾಯಿತು. ಬಾಳೆಹಣ್ಣಿನಗೊನೆ, ಬಿಸ್ಕೀಟು, ದ್ರಾಕ್ಷೆ, ಖರ್ಜೂರ, ಕಲ್ಲು ಸಕ್ಕರೆಗಳು ಬಂದವು. ರತ್ನ ಕೃಷ್ಣನ ಹೊಟ್ಟೆ ಬಿರಿಯುವಂತೆ 'ನಾಷ್ಟಾ' ಮಾಡಿಸಿದಳು. ಕೃಷ್ಣನ ಸ್ವಜಾತಿಯ ಭಾಷೆಯಲ್ಲೇ ಹೇಳಬೇಕಾದರೆ, ಫಲಾಹಾರವಾಯಿತು.

ಇಬ್ಬರಿಗೂ ಹರ್ಷ, ರೋಮಾಂಚಗಳಾಗುತ್ತಿದ್ದವು ರತ್ನನಿಗೂ, ಕೃಷ್ಣನಿಗೂ. ಹತ್ತು ವರ್ಷಗಳ ಹಿಂದಿನ ಪರಿಚಯ, ಕಾಸರಗೋಡಿನಲ್ಲಿದ್ದಾಗ ರತ್ನ ಕೃಷ್ಣನ ಸಹಪಾಠಿಯಾಗಿದ್ದಳು. ರತ್ನ, ವೇಶ್ಯಾಪುತ್ರಿಯಾದರೂ ಕೃಷ್ಣನಿಗೂ ಅವಳಿಗೂ ಗೆಳೆತನವುಂಟಾಗಿತ್ತು. ಅದೇವರ್ಷ ರತ್ನನ ತಾಯಿ 'ದೊಡ್ಡ ಬೇಟೆ'ಯನ್ನು ಹುಡುಕಿಕೊಂಡು ಬೆಂಗೂಳೂರಿಗೆ ಹೋದಳು. ತಾಯಿಯೊಂದಿಗೆ ಮಗಳಿಗೂ ಕಾಸರಗೋಡಿನಿಂದ 'ಗಡೀಪಾರಾ'ಯಿತು. ಅನಂತರ ಕೃಷ್ಣನಿಗಾಗಲಿ, ರತ್ನನಿಗಾಗಲೀ, ಒಬ್ಬರೊಬ್ಬರ ವಾರ್ತೆ ತಿಳಿದಿರಲಿಲ್ಲ.

ರತ್ನ, ಕೃಷ್ಣನನ್ನು ಸರ್ವವಿಚಾರಗಳ ಕುರಿತು ವಿಚಾರಿಸಿದಳು. ಅವನ ವೇತನ, ಸಂಸಾರಗಳ ಕುರಿತು ವಿಚಾರಿಸಿ, ತನಗೆ ಸವತಿಯಿಲ್ಲವೆಂದು ಅರಿತುಕೊಂಡಳು. ಕೃಷ್ಣನು ಕೂಡಾ ಮಂಗಳೂರಿನ ತನ್ನ ಎಲ್ಲಾ ಕಾರ್ಯಕಲಾಪಗಳನ್ನು ಸರಿಯಾಗಿ ತಿಳಿಸಿದರೂ, ಬೆಂಗೂಳೂರಿನಲ್ಲಿರುವ ತನ್ನ ಸಂಬಂಧವನ್ನು ಮಾತ್ರ ತಿಳಿಸಲಿಲ್ಲ. ಅದರಿಂದ ಪ್ರಮಾದವಾದೀತೆಂದು ಬೆದರಿದನು.

ಸಮಯವು ಅರಿವಿಲ್ಲದೆಯೇ ಸಾಗಿಹೋಗುತ್ತಿತ್ತು. ರತ್ನನೂ ಕೃಷ್ಣನೂ ಸರಸಲ್ಲಾಪದಲ್ಲಿ ಮಗ್ನರಾಗಿದ್ದರು. ಅಷ್ಟರಲ್ಲಿ ಹನ್ನೆರಡು ಗಂಟೆಯಾಯಿತು. ಆಗ, ಬಾಗಿಲಿನಲ್ಲಿ 'ಟಕ್,' 'ಟಕ್,' ಎಂದು ಶಬ್ದ. ರತ್ನನಾಗಲೀ ಕೃಷ್ಣನಾಗಲೀ ಅದನ್ನು ಗಮನಿಸಲಿಲ್ಲ. ಆಗ, "ಅಪ್ಸರಾ !" ಎಂದು ಕರೆ. ರತ್ನ,

" ಯಾರದು ? ಏಕೆ ಬಂದಿದ್ದೀರಿ! ಹೋಗಿ ಇಲ್ಲಿಂದ." ಎಂದಳು. ಆಗ ಹೊರಗಿನಿಂದ ಪುನಃ " ನನ್ನ ಗುರುತಿಲ್ಲವೇ, ಅಪ್ಸರಾ! " ಎಂದು ಮಾತು ಕೇಳಿಸಿತು. ಆಗ ಕೃಷ್ಣನಿಗೆ ಅದು ಮಾಧವರಾಯರ ಧ್ವನಿಯೆಂದು ತಿಳಿಯಿತು. ರತ್ನ, ರನ್ನನ ಗದಾಯುದ್ಧದಲ್ಲಿ ಭೀಮನು ಕೌರವನಿಗೆ, ' ಈ ಭೂತಂ ತನ್ನ ಸರಂ ಕೇಳ್ದೊಡಲ್ಲದೆ........' ಎಂದು ಮುಂತಾಗಿ ಏನೇನೋ ಹೇಳಿದಂತೆ, " ಕೃಷ್ಣರಾವ್ ! ನೀವು ಮಾತಾಡಿದಲ್ಲದೆ ಆ ವ್ಯಕ್ತಿ ಹೋಗುವ ಲಕ್ಷಣ ಕಾಣುವುದಿಲ್ಲ. " ಎಂದು ಕೃಷ್ಣನ ಕರ್ತವ್ಯವನ್ನು ಸೂಚಿಸಿದಳು.

ಆಗ ದಪ್ಪ ಸ್ವರದಿಂದ ಕೃಷ್ಣ, " ಯಾರದು ? ಹೋಗುತ್ತೀಯೋ ಇಲ್ಲವೋ ? " ಎಂದು ಗರ್ಜಿಸಿದನು.

ಪರಪುರುಷನ ಮಾತನ್ನು ಕೇಳಿ ಮಾಧವರಾಯರ ತಲೆ ತಿರುಗಿ ಹೊಯಿತು. ಬಲವಾಗಿ ಒಂದು 'ಷಾಕ್' ಹೊಡೆದಂತಾಯಿತು. ಭೂತವು ಸಂಪೂರ್ಣವಾಗಿ ಅವರನ್ನು ತ್ಯಜಿಸಿಹೋಯಿತು.

ಮರುದಿನ ಮಧ್ಯಾಹ್ನದ ಹೊತ್ತಿಗೆ ಕೃಷ್ಣನು ಅಕ್ಕನ ಮನೆಗೆ ಹಿಂದಿರುಗಿದನು. ಲಲಿತೆ ಅವನನ್ನು ಚೆನ್ನಾಗಿ ಉಪಚರಿಸಿದಳು. ಅವಳ ಮುಖವು ಹರ್ಷಮಯವಾಗಿತ್ತು. ಕಣ್ಣುಗಳು ಕೃತಜ್ಞತೆಯನ್ನು ಸೂಚಿಸುವಂತಿದ್ದವು. ಮಾಧವರಾಯರ ಮುಖವು ಮಾತ್ರ ಸಪ್ಪೆಯಾಗಿದ್ದಿತು.

" ನಾಳೆ ಮಧ್ಯಾಹ್ನ ಹೊರಡುವುದೆಂದು ಮಾಡಿದ್ದೇನೆ. "

" ಅವಸರವೇನು ? ನಾಲ್ಕು ದಿನ ಇದ್ದು ಹೋಗು. " ಎಂದು ಮಾಧವರಾಯರು ಕುಗ್ಗಿದ ಧ್ವನಿಯಿಂದ ಹೇಳಿದರು.

" ಇಲ್ಲ; ಭಾವಾ, ಸಾಧ್ಯವಿಲ್ಲ. ಟಿಕೇಟು ತೆಗೆದುಕೊಂಡಾಗಿ ಬಿಟ್ಟಿದೆ." ಎಂದು ಕೃಷ್ಣನು ಉತ್ತರಿಸಿದನು.

ಮರುದಿನ ಮಧ್ಯಾಹ್ನವಾಯಿತು; ಕೃಷ್ಣನು ಹೊರಟನು. ಅಂದೇ ರಾತ್ರಿ ಅಪ್ಸರೆ ಬೆಂಗಳೂರಿನಿಂದ ಮಾಯವಾದ ಸುದ್ದಿ ಇಡೀ ಊರಿಗೆ ಮಿಂಚಿನ ವೇಗದಲ್ಲಿ ಹಬ್ಬಿತು. ಆದರಿಂದ ಆ ಊರ ವೇಶ್ಯಾಸಂಗಿಗಳ ಸೂರ್ಯನು ಮುಳುಗಿದಂತಾದನು. ಅವರ ಹೃದಯದಲ್ಲಿ ಕತ್ತಲೆ, ಕತ್ತಲೆ. ಆದರೆ, ಇದು ಲಲಿತೆಯಂತೆ ಎಷ್ಟು ಮನೆಯ ಸ್ತ್ರೀಯರ ಸಂತೋಷಕ್ಕೆ ಕಾರಣವಾಗಿತ್ತೋ, ಯಾರು ಬಲ್ಲರು ?

ಆದರೆ, ಅಪ್ಸರೆ ಕೃಷ್ಣನೊಡನೆ 'ಪರಾರಿ'ಯಾದ ಸಂಗತಿ ಯಾರಿಗೂ– ಲಲಿತೆ ಮಾಧವರಾಯರಿಗೂ—ತಿಳಿದಿರಲಿಲ್ಲ.

ಎರಡು ಮೂರು ವರ್ಷ ಕಳೆಯಿತು. ಆಗ ಮಂಗಳೂರಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಜರುಗಿತು. ಮಾಧವರಾಯರಿಗೆ ಆಮಂತ್ರಣವಿದ್ದು ದರಿಂದ ಅವರು ಹೋಗಬೇಕೆಂದು ನಿಶ್ಚಯಿಸಿದ್ದರು. ಲಲಿತೆ, "ನಾನೂ ಬರುತ್ತೇನೆ; ನಮ್ಮ ಕೃಷ್ಣನೂ ಅಲ್ಲಿದ್ದಾನಷ್ಟೆ!" ಎಂದುದರಿಂದ ಇಬ್ಬರೂ ಹೊರಟರು.

ಕೃಷ್ಣ, ತನ್ನ ಮನೆ 'ಪೂರ್ಣಿಮಾ ಮಂದಿರ'ವೆಂದು ಹೇಳಿದುದು ಲಲಿ ತೆಗೆ ಚೆನ್ನಾಗಿ ನೆನಪಿತ್ತು. ಬಸ್ಸಿನಿಂದ ಇಳಿದೊಡನೆ ಮೊದಲು 'ಪೂರ್ಣಿಮಾ ಮಂದಿರವನ್ನು ಅನ್ವೇಷಿಸುತ್ತಾ ಹೊರಟರು. ಪೂರ್ಣಿಮಾ ಮಂದಿರವೇನೋ ಸಿಕ್ಕಿತು. ಆದರೆ ಅದರಲ್ಲಿ ಕೃಷ್ಣನಿರಲಿಲ್ಲ. ವಿಚಾರಿಸಲಾಗಿ ಕೃಷ್ಣನು ಅದನ್ನು ವಿಕ್ರಯಿಸಿದ್ದಾನೆಂದು ತಿಳಿಯಿತು. ಪುನಃ ಅನೇಕ ಕಡೆಗಳಲ್ಲಿ ಸುತ್ತಾಡಿ, ಪರಿಶ್ರಮದಿಂದ ಹೇಗೂ ಕೃಷ್ಣನ ಮನೆಗೆ ಬಂದರು.

ಕೃಷ್ಣನ ಮನೆ ಕೋಳೀಗೂಡಿನ ಹಾಗಿತ್ತು; ಈಗಲೋ, ಮತ್ತೆಯೋ ಬೀಳುವಂತಿತ್ತು. ಲಲಿತೆಯ ಕೂಗಿಗೆ ಉತ್ತರವಾಗಿ ಕೃಷ್ಣನು ಕೆಮ್ಮುತ್ತಾ ಹೊರಬಂದನು. ಅಸ್ಥಿಮಾತ್ರವಾಗಿದ್ದ ಶರೀರ, ರೋಗಗಳ ತವರ್ಮನೆ ಯಾಗಿತ್ತು. ಮುಂಚಿನ ಸೌಂದರ್ಯವೆಲ್ಲವೂ ಮಾಯವಾಗಿ ಜೀವದ ಹೆಣ ದಂತಾಗಿದ್ದನು ಅವನು.

ಲಲಿತೆ ವಿಸ್ಮಯದಿಂದ, "ಏನು ಕೃಷ್ಣ ಇದು?" ಎಂದು ಕೇಳಿದಳು.

ಕೃಷ್ಣ, "ಭಾವನ ಭೂತೋಚ್ಚಾಟನೆಯನ್ನು ಮಾಡಹೋಗಿ, ಆ ಭೂತ ನನಗೇ ಹಿಡಿಯಿತು ಅಕ್ಕ. ಅದರ ಪರಿಣಾಮ ಇದು." ಎಂದನು. ಕಣ್ಣುಗಳಿಂದ ಕಣ್ಣೀರಿನ ಕೋಡಿ ಹರಿಯಿತು.

ಲಲಿತೆಗೆ ಕೂಡಲೇ ಎಲ್ಲವೂ ಅರ್ಥವಾಯಿತು ಅವಳ ಕಣ್ಣುಗಳೂ ಕಣ್ಣೀರು ಕರೆಯುವುದರಲ್ಲಿ ಹಿಂಜರಿಯಲಿಲ್ಲ.

---

# ಹಕ್ಕಿಯ ಗರಿ



ನಮ್ಮ ಮನೆಯಿರುವುದು ಒಂದು ಕಾಡುಪ್ರದೇಶದ ನಡುವೆ, ಎಡಗಡೆಗೆ ಹೇರಡವಿ, ಬಲಗಡೆಗೆ ಪ್ರಚಂಡ ಹೊನಲಿಂದ ಹರಿಯುವ ನಂದಿನೀ ಹೊಳೆ. ಮನೆಯ ಹಿಂಗಡೆ ಶೈಲಶ್ರೇಣಿ. ಮನೆಯ ಅಂಗಳಕ್ಕೆ ಒತ್ತಾಗಿ ಸದಾ ಕಣ್ಣಿಗೆ ಹಬ್ಬವನ್ನುಂಟುಮಾಡುವ ಭತ್ತದ ಹೊಲಗಳು. ನಮ್ಮ ಊರಾಚೆ—ಕಾಡಿನ ಆಚೆ—ಮೊಗಲ ಅರಸನ ದರ್ಭಾರು. ಸುತ್ತಣ ಹತ್ತು ಹಳ್ಳಿಗಳಲ್ಲಿ ಅವರ ವಶವಾಗದೆ ಉಳಿದಿದ್ದುದು ನಮ್ಮ ಹಳ್ಳಿಯೊಂದೇ. ನಮ್ಮ ಹಳ್ಳಿಯನ್ನು ನಾಲ್ದೆಸೆಯಿಂದಲೂ ಬಳಸಿಕೊಂಡ ಹಳ್ಳಿಗಳನ್ನೆಲ್ಲಾ ಆಕ್ರಮಿಸಿ, ನಮ್ಮನ್ನು ಬಂಧಿಸಿದರೂ ಮೊಗಲರು ಇನ್ನೂ ಸ್ವಾಧೀನಪಡಿಸಿಕೊಳ್ಳಲು ಶಕ್ತರಾಗಿರಲಿಲ್ಲ. ಗ್ರಾಮಾಧಿಕಾರಿಗಳಾದ ನನ್ನ ತಂದೆಯವರು ಅಷ್ಟು ದಕ್ಷತೆಯಿಂದ ಹಳ್ಳಿಯನ್ನು ಮೊಗಲರ ಗಂಟಲಿನಿಂದ ಕಾಪಾಡಿಕೊಂಡು ಬಂದಿದ್ದರು. ಮೊಗಲರಿಗೂ, ನಮಗೂ ವೈರವೇನೋ ತೀವ್ರವಾಗಿ ಬೆಳೆದಿತ್ತು. ನಮ್ಮೂರವರು ಕಾಡನ್ನು ದಾಟಿ ಆಚೆಗೆ ಕಾಲಿರಿಸಿದರೆ ಸಾಕು; ಮುಂದೆ ಅವರಿಗೆ ಸ್ವಗ್ರಾಮವನ್ನು ಕಾಣುವ ಸುಯೋಗವಿಲ್ಲ ಮೊಗಲರು ನಮ್ಮೂರಿಗೆ ಬಂದರೆ ನಾವೂ, ಹಾಗೆಯೇ ಮಾಡಲು ಏನೂ ಹಿಂಜರಿಯುತ್ತಿರಲಿಲ್ಲ. ಇದರಲ್ಲಿ ತಪ್ಪು ಯಾರದೂ ಇಲ್ಲ. 'ಶಠಂ ಪ್ರತಿ ಶಾಠ್ಯಂ' ಎಂಬ ನೀತಿಯ ಮಾರ್ಗ. ಈ ನೀತಿಯಿಂದಾಗಿಯೇ ಎರಡೂ ಊರ ಜನರು ಕೊಲೆಯ ಭೀತಿಯಿಂದ ನಡುಗುತ್ತಿದ್ದರು. ಸತತ ಸುರಿಯುವ ಈ ರಕುತ ಧಾರೆಯಿಂದ ಭೂದೇವಿಗಾದರೂ ತೃಪ್ತಿಯಾಗಿರಬೇಕು. ಹೋಗಲಿ; ಆ ವಿಚಾರ ಇಲ್ಲಿ ಬೇಡ. ನಾನು ಹೇಳಲಿರುವುದು ಈ ಮತಾಂಧತೆಯನ್ನಲ್ಲ; ಬೇರೆಯೇ ವಿಷಯವನ್ನು.

ಹೊಲಗಳೆಲ್ಲಾ ಹಣ್ಣಾಗಿದ್ದುವು; ಅವುಗಳ ಮೇಲೆ 'ಭುರ್‍ರೆಂದು ಗುಬ್ಬಿಗಳು ಹಾರಾಡುತ್ತಿದ್ದವು. ಒಕ್ಕಲುಗಳ ಸಹಾಯದಿಂದ ಒಂದು ವಾರದೊಳ

ಗಾಗಿ ತಂದೆಯವರು ಧಾನ್ಯಗಳನ್ನು ಅಂಗಳಕ್ಕಿಳಿಸಿದರು ಆದರೆ ಇದರಿಂದ ಕಷ್ಟನಿವಾರಣೆಯಾದಂತಾಗಲಿಲ್ಲ. ಬೇಯಿಸಿ, ಬಿಸಿಲಿಗೆ ಒಣಗಲು ಹಾಕಿದ ಆ ಭತ್ತದ ರಾಶಿಯನ್ನು ಕಾಯದೇ ಹೋದಲ್ಲಿ, ಆ ಬಿಸಿಲು ಒಣಗುವುದರೊಳಗಾಗಿ ಒಂದು ಕಾಳು ಉಳಿಯುವುದೂ ಕಷ್ಟ. ಕಾಡಿನಿಂದ ಭತ್ತಾಪಹಾರಕ್ಕಾಗಿ ಬರುವ ಹಕ್ಕಿಗಳ ಉಪದ್ರ ಬಹಳ. ಅವುಗಳನ್ನು ಓಡಿಸುವುದೇ ಒಂದು ಅಶ್ವಮೇಧ ಯಾಗ ಮಾಡಿದಷ್ಟು ಪ್ರಯಾಸ. ಬೇರೇನೂ ಕೆಲಸವಿಲ್ಲದೆ, ತಾಯಿ ಕೆಲಸದಲ್ಲಿರುವಾಗ ಬಂದು ತೊಂದರೆ ಕೊಡುತ್ತಿದ್ದ ನನ್ನ ತಮ್ಮ ಗೋಪಾಲನನ್ನು ಈ ಕೆಲಸಕ್ಕೆ ನೇಮಿಸಿದರು. ಇಂಥ ಸಾಹಸಕಾರ್ಯಗಳಲ್ಲಿ ಅವನು ಬಹಳ ಚಪಲ. ಬಹು ದಕ್ಷತೆಯಿಂದ ಭತ್ತವನ್ನು ಕಾಪಾಡಿಕೊಂಡು ಬರುತ್ತಿದ್ದ.

ಒಂದು ಬೆಳಗ್ಗೆ ಅಂಗಳದ ಒಂದು ಭಾಗಕ್ಕೆ ಬಿಸಿಲು ಓರೆಯಾಗಿ ಬಿದ್ದುದರಿಂದ ಅಲ್ಲಿ ಭತ್ತವನ್ನು ಒಣಗಿಸಿದ್ದರು. ಆಗಲೇ ಬೆಳಗಿನ ಕಾಫಿಯಾದುದರಿಂದ ಗೋಪಾಲ ಒಳಗೆಬಂದ. ಎಲ್ಲರೂ ಕಾಫಿಕುಡಿಯುವುದರಲ್ಲಿದ್ದುದರಿಂದ ಹೊರಗೆ ಭತ್ತವನ್ನು ಕಾಯಲು ಯಾರೂ ಇರಲಿಲ್ಲ. ಗೋಪಾಲ ಬೇಗಬೇಗನೇ ಕಾಫಿ ತಿಂಡಿಯನ್ನು ಮುಗಿಸಿ ಹೊರಗೋಡಿದ. ಸ್ವಲ್ಪ ಹೊತ್ತಿನಲ್ಲೇ ರಬ್ಬರ್ ಬಿಲ್ಲಿನ 'ಟಂಗ್' ಎಂಬ ಶಬ್ದವು ಕೇಳಿಸಿತು. ಅದರೊಂದಿಗೇ ಹಕ್ಕಿಯೊಂದು ಕಿರುಚಿಕೊಂಡು ಕೆಳಗೆ ಬಿದ್ದಂತಾಯಿತು. ನಾನು ಆಗ ಕಾಫಿ ಕುಡಿದು ಮುಗಿಸಿದ್ದೆನಷ್ಟೆ ! ಈ ಶಬ್ದಗಳನ್ನು ಕೇಳಿ ಹೊರಗೋಡಿದೆ. ಹಕ್ಕಿಯೊಂದು ಭತ್ತದ ಮೇಲೆ ಬಿದ್ದಿದೆ. ಅದರ ರೆಕ್ಕೆಯಿಂದ ರಕ್ತ ಸುರಿಯುತ್ತಿದೆ. ಗೋಪಾಲನು ಅದಕ್ಕೆ ಪ್ರತ್ಯಕ್ಷ ಯಮನಾಗಿ ಹೊಡೆಯಲು ರಬ್ಬರ್ ಬಿಲ್ಲನ್ನೆತ್ತಿ ನಿಂತಿದ್ದಾನೆ. ಗೋಪಾಲನು ಒಳಹೋಗುವುದನ್ನೇ ಕಾಯುತ್ತಿದ್ದ ಹಕ್ಕಿಯೊಂದು ಭತ್ತಕ್ಕೆ ಎರಗಿತ್ತು. ಆದರೆ ಅಷ್ಟರಲ್ಲಿಯೇ ಗೋಪಾಲ ಬಂದುಬಿಟ್ಟಿದ್ದ. ಗುರಿಯಲ್ಲಿ ನಿಪುಣನಾದ ಗೋಪಾಲ ಅದನ್ನು ಹೊಡೆದುಬಿಟ್ಟಿದ್ದ ನಾನು ಅವನನ್ನು ಸುಮ್ಮನಾಗಿಸಿ ಹೋಗಿ, ಕ್ಷತವಿಕ್ಷತಗೊಂಡ ಆ ಹಕ್ಕಿಯನ್ನೆತ್ತಿದೆ. ಬಹು ಮನೋಹರವಾದ ಹಕ್ಕಿ ! ಆ ಎಳಬಿಸಿಲಿನಲ್ಲಿ ಅದರ ರೆಕ್ಕೆಗಳು ಚಿನ್ನದಂತೆ ಥಳಥಳಿಸುತ್ತಿದ್ದವು. ಆ ಹಕ್ಕಿಯ ಹೆಸರೇನೋ ಗೊತ್ತಾಗಲಿಲ್ಲ. ಕಾಡಿನಲ್ಲಿ ಸಾವಿರಾರು ಹಕ್ಕಿಗಳಿವೆ. ಅವುಗಳಿಗೆಲ್ಲಾ ಯಾರು ನಾಮಕರಣ

( ಇದನ್ನು ಓದಿ ಮುಂದಿನದನ್ನು ಓದಿರಿ. )

ಮಾಡುತ್ತಾರೆ ? ನಾನು ಕವಿಯಾಗಿದ್ದ ಪಕ್ಷದಲ್ಲಿ ಅದನ್ನೊಂದು ಹೆಸರು ಕೊಟ್ಟು ಕರೆಯಬಹುದಾಗಿತ್ತು. ಆದರೆ ನಾನು ಕವಿಯಲ್ಲ, ಹುಲ್ಲುಮಾನವ! ಆ ಹಕ್ಕಿಯ ಗಾಯಕ್ಕೆ ನೀರು ಚಿಮುಕಿಸಿ, ಮಲಾಮು ಹಚ್ಚಿ ಬಟ್ಟೆ ಕಟ್ಟಿದೆ. ಅದನ್ನು ಬದುಕಿಸಿದೆ, ಆದರೆ ಬಂಧಿಸಿದೆ. ಇದನ್ನು ಹಕ್ಕಿ ಮೆಚ್ಚಿತೋ, ಇಲ್ಲವೋ, ಗೊತ್ತಿಲ್ಲ. ಆದರೆ ನಾನು ಬಹಳವಾಗಿ ಮೆಚ್ಚಿದೆ.

ಸ್ವಲ್ಪ ಸಮಯ ಕಳೆಯಿತು. ನನ್ನ ಆರೈಕೆಯಲ್ಲಿ ಹಕ್ಕಿ ರಾಜಭೋಗ ದಲ್ಲಿ ಬೆಳೆಯುತ್ತಿತ್ತು. ನಾನು ಯಾವಾಗಲೂ ಅದಕ್ಕೆ ಹಣ್ಣು ಹಾಲಿನ ಸಮಾರಾಧನೆ ಮಾಡಿಸುತ್ತಿದ್ದೆ. ನಾಲ್ಕಾರು ತಿಂಗಳೊಳಗಾಗಿ ನನ್ನಿಂದ ಚೆನ್ನಾಗಿ ಮಾತನಾಡುವುದನ್ನೂ ಆ ಹಕ್ಕಿ ಕಲಿಯಿತು.

ಹೀಗಿರಲು ಒಂದು ದಿನ ಬೆಳಿಗ್ಗೆ ಒಬ್ಬ ಗಡ್ಡದ ಬೈರಾಗಿ ನಮ್ಮ ಮನೆಗೆ ಬಂದ. ಬೈರಾಗಿ ಬರೀ ಬೈರಾಗಿ ಮಾತ್ರವಲ್ಲ; ಎಲ್ಲಾ ವಿದ್ಯೆಗಳನ್ನೂ ಬಲ್ಲವ. ಅವನು ನನಗೆ ಅನೇಕ ಇಂದ್ರ ಜಾಲಗಳನ್ನು ಮಾಡಿ ತೋರಿಸಿದ. ನನ್ನ ಕಣ್ಣೆ ದುರಿಗೇ ಅದೃಶ್ಯನಾಗಿ ಮತ್ತೆ ದೃಶ್ಯನಾಗಿ ಬಂದ. ನಾಯಿ–ಬೆಕ್ಕು–ಹಂದಿ ಗಳಂತೆ ಕೂಗಿದ. ಗ್ರೀಕರ ಆರ್ಫಿಯಸನನ್ನೂ ಮೀರಿ, ವೀಣೆಯನ್ನು ನುಡಿಸಿ ತೋರಿಸಿದ. ನಾನು ಸಂತುಷ್ಟನಾಗಿ, “ ನಿನಗೆ ಏನು ಬೇಕೋ ಬೈರಾಗಿ? ಕೇಳು, ಕೊಡುತ್ತೇನೆ. ” ಎಂದೆ.

“ ಖಂಡಿತ ಕೊಡುತ್ತೀರಾ ಸ್ವಾಮಿ ! ”

ನಾನು ನನ್ನ ಹಕ್ಕಿಯನ್ನು ನನ್ನೊಡನೆ ಕರೆದುಕೊಂಡು ಹೋಗಲು ಮರೆ ತಿರಲಿಲ್ಲ

ಮೂರು ವರುಷ ಇಟಲಿ—ಫ್ರಾನ್ಸನ್ನೆಲ್ಲ ಸುತ್ತಿದೆವು. ಫ್ರಾನ್ಸಿನಲ್ಲಿ ವಿಕ್ಟರ್ ಹ್ಯೂಗೋ, ಗ್ಯಾಡಿ ಮೋಪಾಸರ ಗೋರಿಗಳನ್ನು ಸಂದರ್ಶಿಸಿದೆವು. ಅವರ ಕೈ ಬರಹದ ಕೃತಿಗಳನ್ನು ನೋಡಿ ಸಂತೋಷಿಸಿದೆವು. ಇಟಲಿಯಲ್ಲಿ ವೆನಿಸನ್ನೂ, ವೆಸೂವಿಯಸನ್ನೂ ನೋಡಿದೆವು. ಪೋಪರ ಭೇಟಿ ಮಾಡಿದೆವು. ಇನ್ನು ಇಂಗ್ಲಾಂಡಿಗೆ ಹೋಗೋಣ, ಎಂದಿದ್ದೆವು. ಆದರೆ ತಂದೆಯವರು ಇಷ್ಟರಲ್ಲೇ ಪೂರ್ಣ ಗುಣಮುಖರಾಗಿದ್ದರು. 'ಸಾಕು ಇನ್ನೀ ಪ್ರವಾಸ. ಊರನ್ನು ಕಾಣದೆ ಮೂರು ವರ್ಷಗಳಾದವು ಏನೇನೆಲ್ಲಾ ಆಗಿದೆಯೋ ? ಒಮ್ಮೆ ಊರನ್ನು ನೋಡದೆ ಮನಸ್ಸಿಗೆ ತೃಪ್ತಿಯೇ ಇಲ್ಲ.' ಎಂದುದರಿಂದ ಹಿಂದಿರುಗಿ ಬಿಟ್ಟೆವು.

ನಮ್ಮ ಬರವನ್ನು ಮುಂಚೆಯೇ ತಿಳಿಸಿದ್ದುದರಿಂದ, ಊರ ಗಡಿಯಲ್ಲಿ ಎಲ್ಲರೂ ನಮ್ಮನ್ನು ಸ್ವಾಗತಿಸಲು ಬಂದಿದ್ದರು. ಆದರೆ ಎಲ್ಲರ ಮುಖಗಳೂ ಕಳೆಗುಂದಿದ್ದವು. ಒಬ್ಬರ ಮುಖದಲ್ಲಾದರೂ ಗೆಲವಿಲ್ಲ ಇದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಮುಂದೆ ನಾಲ್ಕಾರು ದಿನಗಳಲ್ಲಿ ಎಲ್ಲೆಲ್ಲೂ ಕೆಂಪು ಟೊಪ್ಪಿಗಳನ್ನು ನೋಡಿ ಇನ್ನಷ್ಟು ಆಶ್ಚರ್ಯವಾಯಿತು. ಒಕ್ಕಲು ಚೆನ್ನನನ್ನು ಹತ್ತಿರ ಕರೆದು ಕೇಳಿದೆ:

" ಏನೋ ಇದು ? ಕೆಂಪು ಟೋಪಿಯ ರಾಜ್ಯವೇ ರಾಜ್ಯ ! "

ಚೆನ್ನನು ಮಾತನಾಡದೆ ತಲೆವಾಗಿ ನಿಂತನು.

" ಏನಾಯ್ತೊ ? ಹೇಳೋ ! "

" ಏನು ಹೇಳಲಿ, ಸ್ವಾಮಿೞ !! "

" ಅಂದರೆ ? " ಪುನಃ ಪುನಃ ಕೇಳಿದೆ.

" ಕೆಂಪು ಟೋಪಿಗಳು ಊರನ್ನು ವಶಮಾಡಿಕೊಂಡರು ! "

ಕೇಳಿ ಸ್ತಂಭೀಭೂತನಾದೆ. ಯಾವುದು ಆಗಬಾರದೋ, ಅದು ಆಗಿ ಹೋಗಿದೆ. ನಾವಿಲ್ಲದಾಗ ಮೊಗಲರು ತಮ್ಮ ವಿಜಯ ಪತಾಕೆಯನ್ನು ಏರಿಸಿ ಬಿಟ್ಟಿದ್ದಾರೆ. ಈ ವಿಚಾರ ಮನೆಯಲ್ಲೆಲ್ಲರಿಗೂ ತಿಳಿದ ಕೂಡಲೇ ಅವರ

ಗೋಳನ್ನು ಹೇಳ ತೀರದು! ಆದರೆ, ಎಷ್ಟು ಗೋಳು ಹುಯ್ದುಕೊಂಡರೂ ಹೋದ ಸ್ವಾತಂತ್ರ್ಯ ಮರಳಿ ಬಂದೀತೇ?

ಇದೇ ದುಃಖದೊಂದಿಗೆ, ಇನ್ನೊಂದು ಮಹಾ ದುಃಖವೂ ಬಂದೊದಗಿತು. ಒಂದು ರಾತ್ರಿ ಹಕ್ಕಿಗೆ ಹಾಲು, ಹಣ್ಣು ನೈವೇದ್ಯ ಮಾಡಿದ ಮೇಲೆ ಪಂಜರದ ಬಾಗಿಲನ್ನು ಮುಚ್ಚಲು ನಾನು ಮರೆತುಹೋದೆ. ಬೆಳಗಾದಾಗ ಹಕ್ಕಿ ಹಾರಿಹೋಗಿತ್ತು. ಎಷ್ಟೆಷ್ಟು ಅರಸಿದರೂ ಸಿಕ್ಕಲಿಲ್ಲ. ದುಃಖಗಳು ಪರಂಪರೆಯಾಗಿ ಬರುತ್ತವೆಂಬುದರ ಅನುಭವವಾಯಿತು.

ಒಂದು ವರ್ಷ ಕಳೆಯಿತು; ಅಷ್ಟರಲ್ಲಿ ಮೊಗಲ ಅರಸನಿಗೆ ಒಂದು ಕಿರೀಟವು ಬೇಕೆಂದೂ, ಉತ್ತಮವಾಗಿ ತಯಾರಿಸಿ ಕೊಡುವವರಿಗೆ ಲಕ್ಷ ವರಹ ಇನಾಮು ಕೊಡಲಾಗುವುದೆಂದೂ ರಾಜ್ಯದಲ್ಲಿ ಡಂಗುರ ಸಾರಲಾಯಿತು. ಇದನ್ನು ಕೇಳಿ ನನ್ನ ಗೆಳೆಯರು ನನ್ನನ್ನು ಪ್ರೋತ್ಸಾಹಿಸಿದರು. "ನೀನು ಮಾಡೋ! ನೀನು ಇಷ್ಟು ದೊಡ್ಡ 'ಕ್ರಾಫ್ಟ್ಸ್‌ಮೇನ್' ಇರುವಾಗ ಬೇರೆ ಯಾವ ಮುಂಡೇಮಗನಿಗೆ ತಾನೇ 'ಪ್ರೈಜ್' ಸಿಕ್ಕೀತು?" ನನಗೂ ಆ ಲಕ್ಷವರಹದ ಆಶಾಭೂತ ಹಿಡಿಯಿತು. ಮುಕುಟ ರಚನೆಯಲ್ಲಿ ಮಗ್ನನಾದೆ. ಗೆಳೆಯರು ದಿನಾಲೂ ಬಂದು ನನ್ನ ಕಿರೀಟವನ್ನು ನೋಡಿ, "ನಿನ್ನ ಇಷ್ಟು ಚಂದವಾದ ಕಿರೀಟದ ಮುಂದೆ ಉಳಿದವರ ಕಿರೀಟಗಳು ಸತ್ತವು!" ಎಂದು ಮುಂತಾಗಿ ಪ್ರೋತ್ಸಾಹಿಸುತ್ತಿದ್ದರು.

ಕಿರೀಟವು ಪೂರ್ಣವಾಯಿತು; ಇನ್ನು ಅದನ್ನು ಹಕ್ಕಿಯ ಗರಿಯಿಂದ ಅಲಂಕರಿಸುವುದು ಮಾತ್ರ ಬಾಕಿ. ಗರಿಗಾಗಿ ಎಲ್ಲೆಲ್ಲಿ ತೊಳಲಿದೆ, ಸಿಕ್ಕಲಿಲ್ಲ. ಕೊನೆಗೆ ಬೇಟೆಯಿಂದಲೇ ದೊರಕಿಸಿಕೊಳ್ಳುವುದೆಂದು ನಿಷ್ಕರ್ಷಿಸಿ, ಕೋವಿಯನ್ನು ಹೆಗಲ ಮೇಲೆ ಹಾಕಿಕೊಂಡು ಕಾಡನ್ನು ಸುತ್ತತೊಡಗಿದೆ. ನಾಲ್ಕು ದಿನ ಸುಮ್ಮನೆ ಸುತ್ತಿದ್ದಾಯಿತು. ಐದನೆಯ ದಿನ ಮರವೊಂದರಲ್ಲಿ ಸೊಗಸಾದ ಹಕ್ಕಿಯೊಂದು ಕಂಡಿತು. ನೋಡಿ, ಅಷ್ಟು ಸಂತೋಷವಾಯಿತು. ಗುರಿಯಿಟ್ಟು ಹೊಡೆದೆ. ಗುರಿ ತಪ್ಪಲಿಲ್ಲ. ಹಕ್ಕಿ ಕೆಳಗೆ ಬಿತ್ತು. ನಾನು ಗರಿಯೊಂದನ್ನು ಕಿತ್ತುಕೊಂಡು ಬಂದೆ. ಉಳಿದ ಹಕ್ಕಿಯ ದೇಹವನ್ನು ಕಬ್ಬೆಕ್ಕೊಂದು ಎತ್ತಿಕೊಂಡು ಓಡಿಹೋಯಿತು.

ಗರಿಯನ್ನು ಕಿರೀಟಕ್ಕೆ ಅಲಂಕರಿಸುವ ಸಮಯ, ಅದರ ಮೇಲೆ ಬರೆದಿದ್ದ ಅಕ್ಷರಗಳ ಕಡೆಗೆ ಕಣ್ಣುಹೋಯಿತು. 'ಶ್ರೀಕಂಠ' ಎಂದು ಗಟ್ಟಿಯಾಗಿ ಓದಿ ಬೆಚ್ಚಿಬಿದ್ದೆ. ನಾನು ಹಿಂದೆ ಸಾಕಿದ ಹಕ್ಕಿಯ ಗರಿಯ ಮೇಲೆ ನನ್ನೊಲವಿನ ಕುರುಹಾಗಿ ನನ್ನ ಹೆಸರನ್ನು ಹಾಗೆ ಬರೆದಿದ್ದೆ. ಈಗ ಅದೇ ಹಕ್ಕಿಯನ್ನ ನಾನು ಕೊಂದದ್ದು.

ಒಡನೆಯೇ ನನ್ನ ಕೈಯಿಂದ ಕಿರೀಟವೂ, ಗರಿಯೂ ಕೆಳಗೆ ಬಿದ್ದುಹೋಯಿತು. ಅದರೊಂದಿಗೇ ಬೈರಾಗಿ ಹೇಳಿದ ಮಾತೂ ನೆನಪಾಯಿತು. ಕಿರೀಟವನ್ನು ಕಾಲಿನಿಂದ ತುಳಿದು ಮನಸ್ಸಿಗೆ ಶಾಂತಿ ದೊರಕಿಸಿಕೊಳ್ಳಲು ಪ್ರಯತ್ನಿಸಿದೆ. ಆದರೆ, ಶಾಂತಿ!—ಅದು ದೊರಕೀತೇ ?



# ಸರಸ ಸಾಹಿತ್ಯದ ಸುಗ್ಗಿ !

| | | | | | | |
|---|---|---|---|---|---|---|
| ೧ | ಉರ್ದೂ ಕಥಾವಳಿ | | ಶ್ರೀ. ಗುರುನಾಥ ಜೋಶಿ | ೦ | ೮ | ೦ |
| ೨ | ಗುರುಚರಣ | (ಶರತ್) | ,, | ೦ | ೪ | ೦ |
| ೩ | ಮಾಗಲಸೂತ್ರ | ,, | ,, | ೦ | ೩ | ೦ |
| ೪ | ಪ್ರೇಮಪಥ | ,, | ,, | ೦ | ೫ | ೦ |
| ೫ | ಮಹೇಶ | ,, | ,, | ೦ | ೩ | ೦ |
| ೬ | ಹೇಮಾಂಗಿನಿ | ,, | ಕುಷ್ಣಮ್ಮ | ೦ | ೪ | ೦ |
| ೭ | ಮಹಾಸತಿ | ,, | ಮಲ್ಲಾರಿ | ೦ | ೭ | ೦ |
| ೮ | ಅಭಾಗಿನಿಯ ಸ್ವರ್ಗ | | ಮಲ್ಲಾರಿ | ೦ | ೨ | ೦ |
| ೯ | ಪ್ರತಿಬಿಂಬ | | (ಶ್ರೀ. ಅನಂತ ಕಾಣೇಕರ) | ೦ | ೬ | ೦ |
| ೧೦ | ಡಾಕ್ಟರ್ ಗಿರೀಶ | | (ಪತ್ತೇದಾರಿ) | ೦ | ೬ | ೦ |
| ೧೧ | ದುರ್ಗಾಮಂದಿರ | | (ಪ್ರೇಮಚಂದ) | ೦ | ೩ | ೦ |
| ೧೨ | ತೂರಯಾ | | ,, | ೦ | ೫ | ೦ |
| ೧೩ | ಲಾಂಛನ | | ,, | ೦ | ೫ | ೦ |
| ೧೪ | ರೈತರಭಾಗ್ಯೋದಯ | | ಫಾಣೇಕರ | ೦ | ೪ | ೦ |
| ೧೫ | ಪಾತ್ರಗಳು | | ಬೀ. ಚಿ. | ೦ | ೧೨ | ೦ |
| ೧೬ | ಮನೆಯ ಸುಖಶಾಂತಿ | | (ಸ. ಪಿ) | ೦ | ೧೨ | ೦ |
| ೧೭ | ಸನ್ಯಾಸಿನಿ | | ... | ೦ | ೧೦ | ೦ |
| ೧೮ | ಅಗಸ್ತ್ಯ ವೀರರು | | ನಾಡಿಗೇರ | ೦ | ೮ | ೦ |
| ೧೯ | ಹೊಸ ಹೆಜ್ಜೆ | | ಕಾದಂಬರಿ | ೦ | ೧೧ | ೦ |
| ೨೦ | ಚಿತ್ರ | (ಶರತ್) | ಮಲ್ಲಾರಿ | ೦ | ೧೨ | ೦ |
| ೨೧ | ನಮ್ಮ ಬದುಕು | | ಆನಂದಕಂದ | ೦ | ೧೪ | ೦ |
| ೨೨ | ದೇವದಾಸ | | ಶರತ್ಕಾದಂಬರಿ | ೧ | ೮ | ೦ |
| ೨೩ | ಆಜಾದ ಹಿಂದ | | ಸುಭಾಷ-ಇತಿಹಾಸ | ೧ | ೦ | ೦ |

ಬರೆಯಿರಿ:— **ಸಮಾಜ ಪುಸ್ತಕಾಲಯ, ಧಾರವಾಡ**